# ಸಿದ್ಧಗಂಗಾ



ತುಮಕೂರಿನಲ್ಲಿ ಇತ್ತೀಚಿಗೆ ಶ್ರೀ ಶ್ರೀ ಗಳವರಿಂದ ಎಚ್. ಎಂ. ಟಿ ಫ್ಯಾಕ್ಟರಿ ಕಟ್ಟಡದ ಶಂಕುಸ್ಥಾಪನೆ ಕಾರ್ಯ ನೆರವೇರಿತು.

ಚಿತ್ರದಲ್ಲಿ ಜಿಲ್ಲೆಯ ಅಸಿಸ್ಟೆಂಟ್ ಕಮಿಷನರ್ ಶ್ರೀ ಶ್ರೀನಿವಾಸನ್ ಎಚ್. ಎಂ. ಟಿ ಫ್ಯಾಕ್ಟರಿಯ ಎಗ್ಸಿಕ್ಯೂಟೀವ್ ಡೈರೆಕ್ಟರ್ ಶ್ರೀ ಅಮಿತ, ಜನರಲ್ ಟೆಕ್ನಿಕಲ್ ಮ್ಯಾನೇಜರ್ ಶ್ರೀ ರಾಮಸುಬ್ಬಾರೆಡ್ಡಿ, ಶ್ರೀ ರಘುರಾಮರೆಡ್ಡಿ, ಶ್ರೀ ಪಾಪೇಗೌಡ, ಶ್ರೀ ರಾಮಕೃಷ್ಣ, ಶ್ರೀ ಮೆನನ್, ಶ್ರೀ ವೇಲಾಯುಧನ್ ಮತ್ತಿತರ ಅಧಿಕಾರಿ ವರ್ಗದವರನ್ನು ಕಾಣಬಹುದು.

ಜುಲೈ, ೧೯೭೪

# 'ಸಿದ್ಧಗಂಗಾ' ಚಿರಾಯುವಾಗಲೆಂದು

## ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

450 ಶ್ರೀ ಬಸಪ್ಪಸ್ವಾಮಿಗಳು
ಶ್ರೀ ದಾಸೋಹ ಮಠ.
ಬೆಳಕವಾಡಿ, ಮಂಡ್ಯ ಜಿಲ್ಲೆ.

451 ಶ್ರೀ ಸಣ್ಣರುದ್ರಪ್ಪ,
ರಾಮಲಿಂಗಪುರ,
ಸಿರಾ ತಾ॥, ತುಮಕೂರು ಜಿಲ್ಲೆ.

452 ಶ್ರೀ ಶಿವರುದ್ರಪ್ಪ ಎಸ್. ಬೆಪ್ಪೂರ್
ಇಂಗಳಹಳ್ಳಿ, ಹುಬ್ಬಳ್ಳಿ ತಾ॥
ಧಾರವಾಡ ಜಿಲ್ಲೆ.

453 ಶ್ರೀ ಟಿ. ಗಂಗಯ್ಯ,
ಜ್ಯೂಯಲರಿ ಮಾರ್ಟ್
ನಗರ್ತಪೇಟೆ, ಬೆಂಗಳೂರು-2

454 ಶ್ರೀ ಟಿ. ಎಸ್. ಸಿದ್ಧಗಂಗಯ್ಯ
ಸಿದ್ಧಗಂಗಾ ಹೈಸ್ಕೂಲ್ ಬಡಾವಣೆ,
ತುಮಕೂರು.

455 ಶ್ರೀ ಬಿ. ವಿರೂಪಾಕ್ಷಯ್ಯ
ಎಲ್ ಐ. ಸಿ ಕಾಲೋನಿ,
ಜಯನಗರ, ಬೆಂಗಳೂರು-11

456 ಶ್ರೀ ಎಸ್. ರಾಜಣ್ಣ
ಶಿವನಹಳ್ಳಿ, ಬೆಂಗಳೂರು-10.

457 ಶ್ರೀ ಹೆಚ್ ಆರ್ ಮೃತ್ಯುಂಜಯ
ರಾಜಾಜಿನಗರ, ಬೆಂಗಳೂರು-10

458 ಶ್ರೀ ಎಂ. ಮುದ್ದಣ್ಣ
ಸೀತಕಲ್, ತ.ವ.ಕೂರು ತಾ॥

459 ಶ್ರೀ ಶ್ರೀ ಮಹದೇವಸ್ವಾಮಿಗಳು
ಕೋಡಿಹಳ್ಳಿ ಮಠ, ಧರ್ಮಪುರಿ ಜಿಲ್ಲೆ
ತಮಿಳನಾಡು.

460 ಶ್ರೀ ಎಂ. ವೀರಭದ್ರಪ್ಪ
ಚಾಮರಾಜಪೇಟೆ, ಬೆಂಗಳೂರು-18

461 ಶ್ರೀಮತಿ ಹೆಚ್, ಸಿ. ಪಾರ್ವತಮ್ಮ
ರಾಜಾಜಿನಗರ, ಬೆಂಗಳೂರು-10

462 ಶ್ರೀ ಎಸ್.ಬಿ. ಸಂಜಪ್ಪ
ಸಿಂಗಾಪುರ, ಚಿಕ್ಕನಾಯಕನ ಹಳ್ಳಿ ತಾ॥
ತುಮಕೂರು ಜಿಲ್ಲೆ.

463 ಗೌಡರ ಶ್ರೀ ತಿಪ್ಪೇಸ್ವಾಮಿ
ದೇವಸಮುದ್ರ, ಮೊಳಕಾಲ್ಮೂರ ತಾ॥
ಚಿತ್ರದುರ್ಗ ಜಿಲ್ಲೆ.

464 ಶ್ರೀ ಹೆಚ್ ಹೆಚ್. ತಿಮ್ಮರೆಡ್ಡಿ
ಕಂಟ್ರಾಕ್ಟರ್,
ರಾಂಪುರ, ಮೊಳಕಾಲ್ಮೂರ ತಾ॥
ಚಿತ್ರದುರ್ಗ ಜಿಲ್ಲೆ.

(ಮುಂದುವರಿಯುತ್ತದೆ)



# ಶ್ರೀವಾಣಿ

ಭಾರತ ಖಂಡ ಸರ್ವಸದ್ಧರ್ಮಗಳ ಸಮನ್ವಯದ ನೆಲೆವೀಡು. ಅದರಲ್ಲಿ ಕರ್ನಾಟಕವಂತೂ ಬೌದ್ಧ, ಜೈನ, ಶೈವ, ವೈಷ್ಣವ, -ಹೀಗೆ ಎಲ್ಲ ಧರ್ಮಗಳ [illegible]ಬೀಡು. ಈ ಕರ್ನಾಟಕದಲ್ಲಿ ಆಳಿದ ಮಹಾಪ್ರಭುಗಳು ಯಾವೊಂದು ಧರ್ಮವನ್ನೂ ಉಪೇಕ್ಷಿಸಿದವರಲ್ಲ. ಪರಂತು ಅವರು ಸರ್ವಧರ್ಮ ಸಹಿಷ್ಣುಗಳಾಗಿದ್ದರು. ಅದರ ರಕ್ಷಕರೂ ಆಗಿದ್ದರು. ಈ ಒಂದಂಶವನ್ನು ಇಂದಿಗೂ ಶಾಸನಗಳೂ ಶ್ರುತಪಡಿಸುತ್ತವೆ. ಹೊಯ್ಸಳ ಶಾಸನವೊಂದರಲ್ಲಿ–

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ ।
ಅರ್ಹಶ್ಚೇತಿ ಹ ಜೈನ ಶಾಸನ ರತಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ವಿದಧಾತು ವಾಂಛಿತಫಲಂ ಶ್ರೀ ಕೇಶವಸ್ಸದಾ ॥

ಶಿವನೆಂದು ಶೈವರು, ವೇದಾಂತಿಗಳು ಬ್ರಹ್ಮನೆಂದು, ಬೌದ್ಧರು ಬುದ್ಧನೆಂದು, ನೈಯಾಯಿಕರು ಕರ್ತನೆಂದು, ಜೈನರು ಅರ್ಹನೆಂದು, ಮೀಮಾಂಸಕರು, ಕರ್ಮವೆಂದು ಯಾವನನ್ನು ಉಪಾಸನೆ ಮಾಡುವರೋ, ಅವನೇ ಈಶನು ...ಎಂದಿದೆ.

ಅಷ್ಟೇಕೆ, ಒಂದೇ ಸಂಸಾರದಲ್ಲಿ ಎಲ್ಲ ಧರ್ಮದವರೂ ಕೂಡಿ ಬಾಳ್ವೆ ನಡೆಸುತ್ತಿದ್ದರು. ಹೊಯ್ಸಳ ವಂಶದ ಬಿಟ್ಟಿದೇವ ಅಥವಾ ವಿಷ್ಣುವರ್ಧನನು ವಿಷ್ಣುಭಕ್ತನಾಗಿದ್ದರೆ, ಅವನ ಪಟ್ಟವರಸಿಯಾದ ನಾಟ್ಯ ಸರಸ್ವತಿ ಶಾಂತಲಾದೇವಿ ಜಿನಭಕ್ತೆ, ಹರಭಕ್ತೆಯಾಗಿದ್ದಳು. ಆಕೆಯ ತಂದೆ ಮಾರಸಿಂಗಮಯ್ಯ ಶಿವಭಕ್ತ, ತಾಯಿ ಮಾಚಿಕಬ್ಬೆ ಜಿನಭಕ್ತೆ, ಹೀಗೆ ಅವರ ಮನೆತನ ಜೈನ-ಶೈವ-ವೈಷ್ಣವ ಮತಗಳ ತ್ರಿವೇಣೀ ಸಂಗಮವಾಗಿತ್ತು.

ಒಟ್ಟಿನಲ್ಲಿ ಕನ್ನಡ ಭೂಮಿ ಸರ್ವಧರ್ಮ ಸಮನ್ವಯ ರೂಪವಾದ ಒಂದು ದಿವ್ಯ ಧರ್ಮಸಂದೇಶವನ್ನು ಜಗತ್ತಿಗೇ ನೀಡಿದೆ. ಆದರೆ ಇಂಥ ನೆಲದಲ್ಲಿ ಇಂದು ಮತ-ಧರ್ಮಗಳ ಸಂಘರ್ಷ ಅವಿರತವಾಗಿ ಸಾಗುತ್ತಿರುವುದು ವಿಷಾದಕರ.

# 'ಸಿದ್ಧಗಂಗಾ'

**ಜುಲೈ, ೧೯೭೮**

ಸಂಪುಟ–೧೪ ಸಂಚಿಕೆ–೭


ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ|| ಚನ್ನಪ್ಪ ಎರೇಸೀಮೆ
ಪಿ. ಎಸ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಅಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10–00** ರೂ


## ಈ ಸಂಚಿಕೆಯಲ್ಲಿ



**ಮುಖಪುಟ**

ತುಮಕೂರಿನ ಎಚ್ ಎಂ. ಟಿ ಫ್ಯಾಕ್ಟರಿ ಕಟ್ಟಡದ ಶಂಕುಸ್ಥಾಪ[ನಾ] ಸಂದರ್ಭದಲ್ಲಿ ಶ್ರೀ ಶ್ರೀ ಗಳವರು.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ–572131 ತುಮಕೂರು ಜಿಲ್ಲೆ

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿ ಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬ[ದ]ವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ[ಸದ]ಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572131 ತುಮಕೂರು ಜಿಲ್ಲೆ

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)



ಅಜ್ಞೇಭ್ಯೋ ಗ್ರಂಥಿನಃ ಶ್ರೇಷ್ಠಾಃ ಗ್ರಂಥಿಭ್ಯೋ ಧಾರಿಣೋವರಾಃ ।
ಧಾರಿಭ್ಯೋ ಜ್ಞಾನಿನಃ ಶ್ರೇಷ್ಠಾಃ ಜ್ಞಾನಿಭ್ಯೋ ವ್ಯವಸಾಯಿನಃ ॥

ಏನೂ ತಿಳಿಯದವರಿಗಿಂತ ಓದಿದವರು ಮೇಲು,
ಓದಿದವರಿಗಿಂತ ನೆನಪಿಟ್ಟುಕೊಂಡಿರುವವರು ಕಡುಮೇಲು,
ನೆನಪುಳ್ಳವರಿಗಿಂತ ವಿಷಯ ಬಲ್ಲವರು ಬಲು ಮೇಲು,
ಅರಿತವಗಿಂತ ಅರಿತು ಆಚರಿಸುವವರು ಅತಿ ಮೇಲು.



ಜೀರ್ಯಂತಿ ಜೀರ್ಯತಃ ಕೇಶಾದಂತಾ ಜೀರ್ಯಂತಿ ಜೀರ್ಯತಃ ।
ಚಕ್ಷುಃ ಶ್ರೋತ್ರೇಚ ಜೀರ್ಯೇತೇ ತೃಷ್ಣೈಕಾ ತುನಜೀರ್ಯತೇ ॥

ವಯಸ್ಸು ಕಳೆದಂತೆ ಕೇಶಗಳು ಕ್ಷಯಿಸುತ್ತವೆ.
ಅಂತೆಯೇ ವಯಸ್ಸು ಕಳೆದಂತೆ ಹಲ್ಲುಗಳು ಉದುರುತ್ತವೆ.
ಕಣ್ಣು ಕಿವಿಗಳ ಶಕ್ತಿ ಉಳಿಯದೇ ನಶಿಸುತ್ತದೆ.
ಆದರೆ ಆಸೆಯೊಂದೇ ನಶಿಸದೇ ಉಳಿಯುತ್ತದೆ.



ಉಪಕಾರಾಚ್ಚ ಲೋಕಾನಾಂ ನಿಮಿತ್ತಾನ್ಮೃಗ ಪಕ್ಷಿಣಾಂ ।
ಭಯಾಲ್ಲೋಭಾಚ್ಚ ಮೂರ್ಖಾಣಾಂ ಮೈತ್ರೀಸ್ಯಾದ್ದರ್ಶನಾತ್ಸತಾಮ್ ॥



ಉಪಕಾರ ಮಾಡುವುದರಿಂದ ದೊರೆಯುವುದು ಜನರ ಸ್ನೇಹ
ಒಂದು ನೆಪದಿಂದ ದೊರಕುವುದು ಪಕ್ಷಿ ಪ್ರಾಣಿಗಳ ಸ್ನೇಹ
ಆಸೆ ಭಯಗಳಿಂದ ದೊರಕಿದರೆ ಮೂರ್ಖರ ಸ್ನೇಹ
ಆಗುವುದು ದರ್ಶನ ಮಾತ್ರದಿಂದಲೇ ಸಜ್ಜನರ ಸ್ನೇಹ.

—'ಕಾವ್ಯಸುಧಾಪ್ರಿಯ'

# ಅಮೃತ ಬಿಂದು

ಧರ್ಮವು ಸೂರ್ಯ ಭಗವಾನನಂತೆ ಮಾನವನ ಬದುಕಿನ ಉದ್ದಗಲವನ್ನು ವ್ಯಾಪಿಸಿದೆ. ಅಂದರೆ ಮನುಷ್ಯನ ಸ್ಥಿತಿ ಧರ್ಮದ ಸ್ಥಿತಿಯನ್ನವಲಂಬಿಸಿದೆ. ಇಷ್ಟೇನು ಜಗತ್ತಿನ ಅಸ್ತಿತ್ವವೇ ಧರ್ಮದ ಅಸ್ತಿತ್ವವನ್ನೇ ಅವಲಂಬಿಸಿದೆ. ಅಂದಮೇಲೆ ಧರ್ಮದ ಸ್ಥಿತಿಯನ್ನ ವಿಚಾರ ಮಾಡಿದಾಗ "ಕರುಣದಿಂದತಿಶಯವಹಧರ್ಮವುಂಟೇ" ಎನ್ನುತ್ತದೆ ಒಬ್ಬ ಸಂತರನುಡಿ. ಜಗತ್ತಿನ ಯಾವ ಧರ್ಮವೇ ಆಗಲಿ ನಿಜವಾದ ಧರ್ಮವೆಂಬ ಹೆಸರಿಗೆ ಸಾರ್ಥಕತೆಯನ್ನು ಪಡೆಯಬೇಕಾದರೆ, ಉದರ ಹರವನ್ನು ವಿಸ್ತರಿಸಿ ಕೊಳ್ಳಬೇಕಾದರೆ, ಕರುಣೆ, ದಯೆ, ಅನುಕಂಪ ಮುಂತಾದ ಪರ್ಯಾಯ ನಾಮಗಳಿಂದ ಹೆಸರಿಸುವ ಮುಖ್ಯಮೂಲ ತತ್ವವೇ ಮಾನವೀಯ ಅನುಕಂಪ ಇದನ್ನೇ ಅಣ್ಣ ಬಸವಣ್ಣನವರು ಸಾರಿದರು "ದಯೆಯಿಲ್ಲದ ಧರ್ಮ ಅದು ಯಾವುದಯ್ಯ ?" ದಯೆಯಿಲ್ಲದ ಧರ್ಮ ಅದು ಎಂತಹದಯ್ಯ ಎನ್ನುತ್ತಾರೆ. ದಯೆಯಿಲ್ಲದ ಧರ್ಮವನ್ನು ಧರ್ಮವೆಂದು ಕರೆಯುವುದಾದರೂ ಹೇಗೆ ಎನ್ನುತ್ತಾರೆ. ದಯೆಯಿರಬೇಕು ಸಕಲ ಪ್ರಾಣಿಗಳಲ್ಲಿ ದಯವೇ ಧರ್ಮದ ಮೂಲ ಎಂಬುದಾಗಿ ಧರ್ಮದ ಉಳಿವು ದಯೆಯನ್ನವಲಂಬಿಸಿದೆ. ಇಂತಹ ದಯೆಯನ್ನು ಅನಾದಿಕಾಲದಿಂದಲೂ ಸಾರಿಕೊಂಡು ಬಂದದ್ದು ಹಿಂದೂ ಧರ್ಮ "ತನಗೆ ಅಪಥ್ಯವಾದದ್ದನ್ನು ಇನ್ನೊಬ್ಬರಿಗೆ ಮಾಡಬಾರದೆಂದು".

—'ದುಂಬಿ'

# ಮಹಾಕವಿ ಮತ್ತು ಮಹಾಕಾವ್ಯ

—ಎಸ್. ಬಸವರಾಜು

ಮಹಾಕವಿ ತತ್ಕಾಲೀನ ಸಮಾಜದ ದರ್ಶಕ. ಅವನ ಮಹಾಕಾವ್ಯ ಆ ಸಮಾಜದ ರತ್ನಕೈಗನ್ನಡಿ. ಮಹಾಕಾವ್ಯಕ್ಕಿರಬೇಕಾದ ಲಕ್ಷಣ ಸಾರ್ವಕಾಲಿಕ ಉನ್ನತ ಮೌಲ್ಯ. ಇಂತಹ ಕವಿ, ಕಾವ್ಯಗಳ ಉದಯವಾಗುವುದು ಆ ನಾಡಿನ ಜನತೆಯ ಬಹುಕಾಲದ ಪರಿಶ್ರಮದ ಫಲ. ಕನ್ನಡನಾಡಿನ ಪುಣ್ಯಗರ್ಭದಲ್ಲೂ ಅಂತಹ ಮಹಾಕವಿಗಳು-ಮಹಾಕಾವ್ಯಗಳು ಉದಿಸಿ ಬಂದಿವೆ. ಅದನ್ನು ಮಾನ್ಯ ಲೇಖಕರು ಅತಿಸಂಕ್ಷೇಪಿಸಿ ತಿಳಿಯಪಡಿಸಿದ್ದಾರೆ.

ಸ್ತ್ರೀಯು ಗರ್ಭಧರಿಸಿದ ಮೇಲೆ ನವ ಮಾಸಗಳ ಬಳಿಕ ಶಿಶುವಿಗೆ ಜನ್ಮನೀಡುತ್ತಾಳಷ್ಟೆ. ಅಂತೆಯೇ ಮಹಾಕವಿಯ ಜೀವಿತದ ಪಕ್ವಸ್ಥಿತಿಯಲ್ಲಿ ಮಹಾಕಾವ್ಯ ಜನ್ಮತಾಳುತ್ತದೆ. ಯಾವುದೇ ಭಾಷೆಯ ಮಹಾಕಾವ್ಯವಾಗಲಿ ಒಮ್ಮಿಂದೊಮ್ಮೆಗೆ ಹುಟ್ಟಿರಲಾರದು-ಹುಟ್ಟಲು ಸಾಧ್ಯವೂ ಇಲ್ಲ. "ಕವಿಯ ಬುದ್ಧಿ ಸಮಾಜ ಮತ್ತು ಭಾಷೆ-ಇವುಗಳ ಪರಿಪಕ್ವ ಸ್ಥಿತಿಯ ಪರಿಣಿತ ಹಂತದಲ್ಲಿ ಮಹಾಕಾವ್ಯ ಮೈ ದೋರುತ್ತದೆ" ಎಂಬುದು ಪ್ರಸಿದ್ಧ ಆಂಗ್ಲ ಕವಿ-ವಿಮರ್ಶಕ ಟಿ. ಎಸ್. ಎಲಿಯಟ್ಟನ ಮತ.

ಮಹಾಕಾವ್ಯವನ್ನು ಕುರಿತು ನಮ್ಮಲ್ಲಿ (ಭಾರತೀಯರಲ್ಲಿ) ಮತ್ತು ಪಾಶ್ಚಾತ್ಯರಲ್ಲಿ ವಿಪುಲವಾದ ಚರ್ಜೆಯೇ ನಡೆದಿದೆ. ಈ ಚರ್ಜೆಯೆಲ್ಲವನ್ನು ಸಂಗತಗೊಳಿಸಿ ಮಹಾಕಾವ್ಯದ ವ್ಯಾಖ್ಯೆಯನ್ನು ಸೂತ್ರೀಕರಿಸಿ ಹೇಳುವುದು ಕಷ್ಟ. ಆದರೂ "ಮಹೋನ್ನತ ಮೌಲ್ಯಗಳಿಂದ ಕೂಡಿದ ಸುದೀರ್ಘವಾದ ಕಾವ್ಯವೇ ಮಹಾಕಾವ್ಯ" ಎನ್ನಬಹುದು. ಅಂದರೆ ಮಹಾಕಾವ್ಯಕ್ಕೆ ಮಹತ್ತು-ಬೃಹತ್ತುಗಳೆರಡು ಅತ್ಯಾವಶ್ಯಕ. ಮಹತ್ತಿದ್ದರೇ ಮಹಾಕಾವ್ಯವೆನಿಸುವುದು. ಇಸ್ಟು ಮಹತ್ತನ್ನು ಧಾರಣೆ ಮಾಡಿಕೊಳ್ಳಲು ಬೃಹತ್ತು ಬೇಕೇ ಬೇಕು.

ಜೀವಾಣುಗಳ ಒಗ್ಗೂಡುವಿಕೆಯಿಂದಾದ ಭ್ರೂಣ, ತನ್ನ ಬೆಳವಣಿಗೆಯ ಕ್ರಮದ ಆದೆಷ್ಟೋ ಮಜಲುಗಳನ್ನು ದಾಟಿ, ಶಿಶು ರೂಪದಿಂದ ತಾಯಿಯ ಗರ್ಭದಿಂದ ಹೊರಬರುತ್ತದೆ. ಹಾಗೆಯೇ ಮಹಾಕಾವ್ಯದ ಸಂಕಲ್ಪ ಶಕ್ತಿ ಪ್ರತಿಭಾ ಸಂಪನ್ನನಾದ ಕವಿಯ ಸೃಷ್ಟ್ಯಾತ್ಮಕ ಗರ್ಭದಲ್ಲಿ ಬಿಂದು ರೂಪದಲ್ಲಿ ಅಂಕುರಿಸಿ ಕವಿಯ ಬುದ್ಧಿ-ಭಾವ-ಅನುಭವಗಳಿಂದ ಸಂಪನ್ನವಾಗಿ ಅವನ ಜೀವಿತದ ಪಕ್ವಸ್ಥಿತಿಯಲ್ಲಿ ಸಿಂಧುವಾಗಿ ರೂಪುಗೊಂಡು ಮೂರ್ತೀಭವಿಸುತ್ತದೆ. ಹೀಗೆ ಹೊರತೋರು ವುದಕ್ಕೆ ಮುನ್ನ ಮಹಾಕಾವ್ಯದ ಸಂಕಲ್ಪಶಕ್ತಿ, ಆದೆಷ್ಟೋ ಹಿಂದಿನಿಂದ ಸಮಾಜದಲ್ಲಿ ಒಳಗೊಳಗೇ ತುಡಿಯುತ್ತಿರುತ್ತದೆ. ಈ ಬಹುಕಾಲದ ಬೇಡಿಕೆಯನ್ನು ಮಹಾಕವಿಯಾದವನು ಮಾತ್ರಗ್ರಹಿಸಿ, ಅದಕ್ಕೊಂದು ಸುಸಂಗತವಾದ ಹಾಗೂ ಅಪೂರ್ವವಾದ ರೂಪುಕೊಟ್ಟು ಈಡೇರಿಸುತ್ತಾನೆ.

ಮಹಾಕವಿ ಮಹಾಕಾವ್ಯವನ್ನು ಸೃಜಿಸ

ತ್ತಾನೆ. ಅಂತೆಯೇ ಮಹಾಕಾವ್ಯ ಮಹಾಕವಿಯನ್ನು ಸೃಜಿಸುತ್ತದೆ. "ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸ್ಸಿನ ಮೇರುಕೃತಿ, ಮೇಣ್ ಜಗದ್ಭವ್ಯ ರಾಮಾಯಣಂ!"-ಎಂಬ ಕವಿವಾಣಿಯಲ್ಲಿ ಮೇಲಿನ ಮಾತಿನ ಅರ್ಥವನ್ನು ಗ್ರಹಿಸಬಹುದು. ತಾಯಿ ಮಗುವಿಗೆ ಜನ್ಮ ಕೊಡುತ್ತಾಳೆ-ಮುಂದೆ ಅದನ್ನು ಲಾಲಿಸಿ ಪಾಲಿಸಿ ನಡತೆಯನ್ನು ತಿದ್ದಿ, ಅದರ ಭವಿಷ್ಯವನ್ನು ಹಸನಾಗಿಸುತ್ತಾಳೆ. ಅಂತೆಯೇ ಮಗುವೂ ತಾಯಿಯನ್ನು ಪರೋಕ್ಷವಾಗಿ ತಿದ್ದುವ ಸಾಧ್ಯತೆ ಉಂಟು. ಕನ್ಯಾವಸ್ಥೆಯಲ್ಲಿದ್ದ ಲಘುತ್ವ, ಚಾಂಚಲ್ಯಗಳೆಲ್ಲ ಪ್ರಸವದ ಬಳಿಕ ಬಹುಪಾಲು ಮಾಯವಾಗುತ್ತವೆ. ಪತ್ನಿಯಾಗಿ ಆ ಹೆಣ್ಣಿನಲ್ಲಿ ತಾಯ್ತನದ ಗಾಂಭೀರ್ಯ, ಔದಾರ್ಯ ಮುಂತಾದ ಗುಣಗಳು ಮೂಡುತ್ತವೆ. ಮಗುವಿನಿಂದ ತಾಯಿಯಾದವಳ ಜೀವನಕ್ಕೊಂದು ಸಾರ್ಥಕತೆ ಲಭ್ಯವಾದಂತಾಗುತ್ತದೆ. ಮಗುವಿನ ಮುಖವನ್ನು ಕಾಣುತ್ತಲೇ ಆಕೆಯ ಸಣ್ಣತನ-ಸಂಕೋಚಗಳೆಲ್ಲಾ ದೂರವಾಗಿ ಆನಂದದ ರಸಲಹರಿಯಲ್ಲಿ ತೇಲುತ್ತಾಳೆ-ಕಲ್ಪನಾ ಸಾಮ್ರಾಜ್ಯವನ್ನು ಕಟ್ಟುತ್ತಾಳೆ.

ಇನ್ನು ಸ್ತ್ರೀಯು ಪ್ರಸವದ ನಂತರ ಶಕ್ತಿಗುಂದುವುದು ಸಹಜ ಹಾಗೆಯೇ ಮಹಾಕಾವ್ಯಕ್ಕೆ ಜನ್ಮ ಕೊಟ್ಟ ಬಳಿಕ ಮಹಾಕವಿ ಹಾಗೂ ಸಮಕಾಲೀನ ಸಮಾಜ ಶಕ್ತಿ ಹೀನವಾಗುತ್ತದೆ. ಇದಕ್ಕೆ ಕಾರಣ ಸಮಾಜದ ಉದಾತ್ತ ತತ್ವಗಳು, ಜನರ ಜೀವನ ಮೌಲ್ಯಗಳು ಮಹಾಕವಿಯ ಪ್ರತಿಭಾಸ್ಪರ್ಶದಿಂದ ಸುಸಂಗತವೂ, ಸುಂದರವೂ ಆಗಿ ರೂಪುಗೊಂಡು, ಅನಂತರ ಕಾವ್ಯದಲ್ಲಿ ಅಸ್ಥಿತ್ವವನ್ನು ಪಡೆಯುತ್ತವೆ. ಇನ್ನು ಮಹಾಕಾವ್ಯದ ರಚನಾಕಾಲದಲ್ಲಿ ಕವಿಯು ತಪೋವಲ್ಮೀಕದಲ್ಲೇ ಹುದುಗಿರ ಬೇಕಾಗುತ್ತದೆ. ಅಂದರೆ ಆ ಕಾಲದಲ್ಲಿ ಸದಾ ಯೋಗಿಯಂತೆ ಏಕಾಂತ ವಾಸಿಯೂ, ಸ್ಥಿರಚಿತ್ತನೂ ಅಂತರ್ಮುಖಿಯೂ ಆಗಿ, ಭಾವಸಮಾಧಿಯಲ್ಲಿರ ಬೇಕಾಗುತ್ತದೆ. ಮಹಾಕಾವ್ಯದಲ್ಲಿ ಕವಿಯ ಪ್ರತಿಭೆ, ಪಾಂಡಿತ್ಯ, ಅಭ್ಯಾಸ ಎಲ್ಲವೂ ಸಂಲಗ್ನಗೊಂಡಿರುತ್ತವೆ. ಆವನ ಅಂತಃಸತ್ವವೇ ಅದಕ್ಕಾಗಿ ಛಟ್ಟಿ ಇಳಿಸಲ್ಪಟ್ಟಿರುತ್ತದೆ. ಧಾರೆಯೆರೆಯಲ್ಪಟ್ಟಿರುತ್ತದೆ. ಹೀಗಾಗಿ ಮಹಾಕಾವ್ಯದಲ್ಲಿ ಮಹಾಕವಿಯ ಅಂತಃಸತ್ವ ಮತ್ತು ಯುಗ ಪ್ರಜ್ಞೆಗಳೆರಡೂ ಎಳೆಯಿಸುವುದರಿಂದ ಕವಿ ಮತ್ತು ಸಮಾಜ ಬರಡಾಗುವುದು ಸಹಜ.

ವಿಶ್ವದ ಯಾವುದೇ ಭಾಷೆಯ ಸಾಹಿತ್ಯದಲ್ಲಾಗಲೀ ಮಹತ್ತು-ಬೃಹತ್ತುಗಳೆರಡರಲ್ಲೂ ಮಹಾಕಾವ್ಯಗಳೆನಿಸಿಕೊಂಡು ದೇಶಕಾಲಾತೀತವಾಗಿ, ವಿಶ್ವಧರ್ಮದ ಪರಿಪಾಕ ಹಾಗೂ ದ್ಯೋತಕವಾಗಿ ನಿಲ್ಲಬಲ್ಲಂತಹ ಕೃತಿಗಳು ಬೆರಳಿನಲ್ಲಿ ಎಣಿಸುವಷ್ಟು ಮಾತ್ರ. ಈ ಮಾತು ಕನ್ನಡ ಸಾಹಿತ್ಯಕ್ಕೂ ಹೊರತಾದುದಲ್ಲ. ಕನ್ನಡದಲ್ಲಿ ಸುಮಾರು ಒಂದೂವರೆ ಸಹಸ್ರ ವರ್ಷಗಳ ಸುದೀರ್ಘ ಹಾಗೂ ಸಮೃದ್ಧವಾದ ಸಾಹಿತ್ಯ ಪರಂಪರೆ ಇದೆ. ಈ ಕಾಲಾವಧಿಯಲ್ಲಿ ಅದೆಷ್ಟೋ ಸಾಮಾನ್ಯ ವರ್ಗದ ಮಧ್ಯಮವರ್ಗದ ಮತ್ತು ಶ್ರೇಷ್ಠವರ್ಗದ ಕಾವ್ಯಗಳು ಮೈದಳೆದಿವೆ. ಕೆಲವು ಭಾಗಶಃ ಮಹಾಕಾವ್ಯಗಳೆನ್ನಬಲ್ಲಂತವೂ ಇವೆ. ಅಲ್ಲದೆ ಈ ಅವಧಿಯಲ್ಲಿ ಮಹತ್ತು-ಬೃಹತ್ತುಗಳೆರಡರಲ್ಲೂ ಮಹಾಕಾವ್ಯದ ಗದ್ದುಗೆಯಲ್ಲಿ ವಿರಾಜಮಾನವಾಗಿದ್ದು, ನುಡಿದೇವಿಯ ಗರ್ಭಗುಡಿಯಲ್ಲಿ ಬೆಳಗುವ ನಿತ್ಯನಂದಾದೀವಿಗೆಗಳಾಗಿ ರಾರಾಜಿಸುವ ಮಹತ್ಕೃತಿಗಳೂ ಮೈದೋರಿವೆ. ಆ ಮಹಾಕಾವ್ಯಗಳ ಮೈದೋರಿದ ಪ್ರಮುಖ ಘಟ್ಟಗಳ ಪಕ್ಷಿನೋಟ ಮುಂದಿನ ಪ್ರಯತ್ನ.

ಪಂಪನಿಗೂ ಪೂರ್ವದಲ್ಲಿ ಅದೆಷ್ಟೋ ಕಾಲದಿಂದಲೂ ತುಡಿಯುತ್ತಾಬಂದ ಮಹಾಕಾವ್ಯದ ಸಂಕಲ್ಪ ಶಕ್ತಿ ಪ್ರತಿಭಾ ಸಂಪನ್ನನಾದ ಈ ಆದಿ ಮಹಾಕವಿಯಲ್ಲಿ ವ್ಯಕ್ತರೂಪವನ್ನು ಪಡೆಯಿತು. ಪಂಪನ ಮೇರುಕೃತಿಗಳಾವ ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ. ಆದಿಪುರಾಣಕ್ಕಿಂತ ವಿಕ್ರಮಾರ್ಜುನ ವಿಜಯವೇ ಹೆಚ್ಚು ಪರಿಣತವೂ ಪ್ರತಿಭಾನ್ವಿತವೂ ಆದ ಕೃತಿ. ಮೇಲಾಗಿ ಕಲಿತವರ ಕಲ್ಪವೃಕ್ಷ. ಎಂಬೀ ಕೃತಿಗಳು ಮೂಡಿಬಂದ ಮೇಲೆ ಕನ್ನಡ ಸಾಹಿತ್ಯದ ಸುವರ್ಣ ಯುಗ ಆರಂಭವಾಯಿತು. ಆದರೂ ಮುಂದೆ ಕ್ರಿ. ಶ. ೧೨ನೇ ಶತಮಾನದವರೆಗೂ ಆತನ ಕೃತಿಗಳನ್ನು ಇಕ್ಕಿ ಮೆಟ್ಟುವುದಿರಲಿ ಸರಿಗಟ್ಟುವ ಕಾವ್ಯಗಳಾವುವೂ ಹುಟ್ಟಲೇ ಇಲ್ಲ. ಇದು ಆಕಾಲದ ದೌರ್ಬಲ್ಯವನ್ನು ಸೂಚಿಸುತ್ತದೆ.

ಅಂದರೆ ಪಂಪ ಮಹಾಕವಿಯ ಕಾವ್ಯಗಳ ಸುಸಮೃದ್ಧ ನಾದ ಬೆಳೆಯಿಂದ ಅವನ ಅನಂತರದ ಯುಗ ಶಕ್ತಿ ಗುಂದಿತೆಂದೇ ಹೇಳಬೇಕು. ಶಕ್ತಿಹೀನವಾಯಿತೆಂದ ಮೇಲೆ ಮಹಾಕಾವ್ಯದ ಸಂಕಲ್ಪಶಕ್ತಿಯು ಒಳತುಡಿತ ಇಲ್ಲನೆಂದಲ್ಲ. ಮುಂದೆ ನಮಗೆ ಮಹಾಕಾವ್ಯದ ಆವಿರ್ಭಾವದ ಸೂಚನೆ ಕಂಡುಬರುವುದು, ಹನ್ನೆರಡನೆಯ ಶತಮಾನದಲ್ಲಿ. ಆದರೆ ಈ ಘಟ್ಟದಲ್ಲಿ ಸಂಭವಿಸಿದ ಧಾರ್ಮಿಕ, ಸಾಮಾಜಿಕ, ರಾಜಕೀಯ ಹಾಗೂ ಎಲ್ಲಕ್ಕೂ ಮಿಗಿಲಾಗಿ ಸಾಹಿತ್ಯಕ ನಿಟ್ಟುಗಳಲ್ಲಿ ಸಂಭವಿಸಿದ ಕ್ರಾಂತಿಯಿಂದ, ಆ ಸಂಕಲ್ಪ ಶಕ್ತಿ ಕೇಂದ್ರೀಕೃತವಾಗದೆ ವಿಕೇಂದ್ರೀಕೃತವಾಗಿ ಹಲವರಲ್ಲಿ ಹಂಚಿ ಹೋಯಿತು. ಈ ಘಟ್ಟದ ಮಹಾಕಾವ್ಯದ ಸಂಕಲ್ಪ ಶಕ್ತಿಯು ಸುಳುಹು-ಹೊಳಹುಗಳನ್ನು ಶಿವಶರಣರ ವಚನಗಳಲ್ಲಿಯೂ, ಹರಿಹರ-ರಾಘವಾಂಕರ ಕೃತಿಗಳಲ್ಲಿಯೂ ಕಾಣಬಹುದು. ಹರಿಹರನ ಕೃತಿಗಳು ಬಹುಮಟ್ಟಿಗೆ ಮಹಾಕಾವ್ಯಗಳೆನಿಸಿಕೊಂಡರೂ, ಕೆಲವೇ ಕಾರಣಗಳಿಂದ ಚ್ಯುತವಾಗುವುದನ್ನು ಕಾಣುತ್ತೇವೆ. ಇದಕ್ಕೆ ಅವನ ಧರ್ಮಪರವಾದ ಸೀಮಿತ ದೃಷ್ಟಿಯೂ ಒಂದು ಕಾರಣವೆನ್ನಬಹುದು. ಆದರೂ ಹರಿಹರ ಮಹಾಕವಿಯೆಂಬುದರಲ್ಲಿ ಅವನ ಅಸಾಧಾರಣ ಪ್ರತಿಭೆಯಲ್ಲಿ ಸಂಶಯವಿಲ್ಲ. ನಡುಗನ್ನಡ ಸಾಹಿತ್ಯದಲ್ಲಿ ಅವನಿಗೆ ಸರ್ವೋಚ್ಚ ಸ್ಥಾನ ಮೀಸಲು. ಅವನ ಶ್ರೇಷ್ಠ ಕೃತಿಗಳಾದ 'ಬಸವರಾಜದೇವರ ರಗಳೆ' ಮತ್ತು 'ಗಿರಿಜಾಕಲ್ಯಾಣ' ಇವುಗಳನ್ನು ಬಹುಮಟ್ಟಿಗೆ ಮಹಾಕಾವ್ಯಗಳೆಂದೇ ಹೇಳಬೇಕು.

ಮುಂದೆ ಕ್ರಿ. ಶ. ೧೫ ನೇ ಶತಮಾನದಲ್ಲಿ ಮತ್ತೆ ಮಹಾಕಾವ್ಯದ ಉಗಮವನ್ನು ಕಾಣುತ್ತೇವೆ. ಹಿಂದಿನ ಕೆಲವು ಶತಮಾನಗಳಿಂದ ರೂಪುಗೊಂಡ ಮಹಾಕಾವ್ಯದ ಬೀಜ ಶಕ್ತಿ ಮಹಾಕವಿ ಕುಮಾರ ವ್ಯಾಸನ ಪ್ರತಿಭಾ ಸಂಪನ್ನವಾದ ಸೆಂಪಿನ ಇಂಪಾದ ವಾತಾವರಣದಲ್ಲಿ ಮೊಳೆದೋರಿ ಸಸಿಯಾಗಿ ಪಲ್ಲವಿಸಿ "ಕರ್ಣಾಟ ಭಾರತ ಕಥಾಮಂಜರಿ" ಎಂಬ ಕಲ್ಪವೃಕ್ಷನಾಗಿ ಸಾರಸ್ವತ ಜೀವಿಗಳ ಹಸಿವು ತೃಷೆಗಳನ್ನು ಹಿಂಗಿಸಿತು. ಈ ಮಹಾಕಾವ್ಯ ಕಲಿಯದವರ ಕಾಮಧೇನುವಾದರೆ, ಕಲಿತವರ ಗಂಟಲಗಾಳ ಹೌದು. ಕುಮಾರ ವ್ಯಾಸನ ಷಟ್ಪದಿ ಪದ್ಯಗಳ ಭಾವವನ್ನು ಗ್ರಹಿಸುವುದು ಸುಲಭ-ಆದರೆ ವಿಚಿಕಿತ್ಸಕ ಬುದ್ಧಿಯಿಂದ ಪದಶಃ ಅರ್ಥ ಮಾಡಲು ಹೋದರೆ, ಆತನ ಪ್ರತಿಭಾ ವಿದ್ಯುದ್ದೈನ್ಯವಾದ ಶಬ್ದಜಾಲದಲ್ಲಿ ಕಾಲ್ತೊಡಕಿ ಸಿಕ್ಕಿ ನರಳ ಬೇಕಾಗುತ್ತದೆ-ಗಂಟಲಿಗೆ ಗಾಳ ಸಿಕ್ಕಿಕೊಂಡಂತೆ ಕಂಠ ಬಿಗಿದು ಹೋಗುತ್ತದೆ. 'ಕಾವ್ಯಕ್ಕೆ ಗುರು' ವೆನಿಸಿದ ಈ ಮಹಾತ್ಕೃತಿಯು ಜನನದ ನಂತರ ಯುಗ ಶಕ್ತಿ ಮತ್ತೆ ದುರ್ಬಲವಾಗುವುದನ್ನು ಕಾಣುತ್ತೇವೆ. ಕಳೆದ ನಾಲ್ಕೈದು ಶತಮಾನಗಳ ನಿರಂತರ ಸಾಗುವಿಕೆಯಿಂದಾಗಿ, ವೈಚಾರಿಕ ಹಿನ್ನೆಲೆಯಿಂದಾಗಿ ಮತ್ತೆ ಕತಕತನೆ ಕುದಿದು ಪುಟಿಯಲಾರಂಭಿಸಿದ ಮಹಾಕಾವ್ಯದ ಸಂಕಲ್ಪ ಶಕ್ತಿಯು, ಈ ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ ಇಂದಿನ ಯುಗ ಪ್ರಜ್ಞೆಯನ್ನು ಮೈಗೂಡಿಸಿಕೊಂಡು ರಸಋಷಿ ಶ್ರೀ ಕುವೆಂಪುರವರಲ್ಲಿ ಮೂರ್ತೀಭವಿಸಿದೆ. "ಪಾಪಿಗುದ್ಧಾರವಿಹುದ ಈ ಸೃಷ್ಟಿಯ ಮಹದ್‌ವ್ಯೂಹ ರಚನೆಯೊಳು" ಎಂಬ ಉದಾರ-ಉದಾತ್ತ-ಆದರ್ಶ ತತ್ತ್ವದ ಪ್ರತೀಕವೇ ಈ ಯುಗದ ಮಂಗಳಮಯ ಮಹಾಕಾವ್ಯವಾದ "ಶ್ರೀ ರಾಮಾಯಣ ದರ್ಶನಂ."

ಮಾರಾರಿಯ ಬೆಸನದಿಂದ ಬಸವಣ್ಣ
ಧಾರುಣಿಗೆ ಅವತರಿಸಿ
ಸಾರಾಯ ಸದ್ಭಕ್ತಿಯ ತೋರಿದನು
ಶಿವಶರಣರೆಲ್ಲರಿಗೆ.

—ಮಡಿವಾಳಮಾಚಿದೇವ

# ಬಸವರಸ ತೋರಿದರೇ ಹೊಸ ಹೊಸ ಲೀಲೆಗಳು-೩

—ಹೆಚ್. ಜಿ. ರಾಧಾದೇವಿ

ಮಾದರಸ ಮಾದಲಾಂಬಿಕೆಯರ ಪುತ್ರ
ಾಗಿ ಈ ಶಿಶು ಬೆಳೆಯುತ್ತಿರುವಾಗಲೇ ಮುಂದೆ
ಾಸು ಭಕ್ತಿ ಭಂಡಾರಿ ಎನ್ನುವ ಬಿರುದಿಗೆ ಅರ್ಹನಾ
ಾವ ಪರಿಯನ್ನು ತೋರುತ್ತಾನೆ.

ಬರಿಯ ಹಾಲು ಕುಡಿಸಿದ್ರೆ ಸುವ್ವಲಾಲಿ ।
ಒರಲಿ ಅಳುವ—ಚೆಲ್ಲುವ—ಸುವ್ವಲಾಲಿ ॥
ಹಿರಿದಾದ ಶಿವನಾಮ ಸ್ಮರಿಸೆ ಸುವ್ವಲಾಲಿ ।
ಚಪ್ಪರಿಸಿ ಕುಡಿದಾನೆ ಸುವ್ವಲಾಲಿ ॥

ಲ್ಲ ಮಕ್ಕಳಿಗೆ ಕುಡಿಸಿದಂತೆ ಗಿಂಡಿಯಲ್ಲಿ ಹಾಲು
ಂಡು ಬಗೆ ಬಗೆಯ ಮುದ್ದು ಮಾತಾಡುತ್ತ ಕುಡಿಸಲಿ
ಸಿದರೆ ಈ ಮಗು ಬಟ್ಟಲನ್ನು ಎಸೆದು ಚೀರಿ ಅಳು
ದೆ. ಶಿವನಾಮ ಸ್ಮರಿಸುತ್ತ ಹಾಲನ್ನು ಕುಡಿಸಿದರೆ
ಂತೋಷದಿಂದ ಕುಡಿಯುತ್ತದೆ. ತಾಯಿಗೆ ಪಾಪ
ೂಟ್ಟಮೊದಲು ಈ ಗುಟ್ಟು ಗೊತ್ತಿರಲಿಲ್ಲ. ಕೆನೆಗಟ್ಟಿಲ್ಲ
ಂದೊ ಸಕ್ಕರೆ ಸಾಲದೆಂದೊ— ಏಲಕ್ಕಿ ಹುಡಿಯ
ಾಸನೆ ಒಲ್ಲದೆಂದೋ ಯೋಚಿಸಿ ಪರಿತಪಿಸುತ್ತಾಳೆ.
ದರೆ ಊರಿನ ಹಿರಿಯ ಶಿವಭಕ್ತ ಹಾಗೂ ಪರಮ
ಜ್ಞಾನಿ ನಾಗರಸ ಬಂದು ಮಗುವಿನ ರಹಸ್ಯ ಬಯಲು
ಾಡುತ್ತಾನೆ.

ಶಿವನಾಮದೊಡನೆ ಹಾಲ್ಕುಡಿಸು ಸುವ್ವಲಾಲಿ ॥
ಶಿವನಾಮ ಜೋಗುಳ ತೂಗು ಸುವ್ವಲಾಲಿ ॥
ಶಿವನಾಮ ರಕ್ಷಾಮಂತ್ರ ಕೇಳು ಸುವ್ವಲಾಲಿ ॥
ಶಿವಭಕ್ತ ನಂದಿ ಇವನು ಸುವ್ವಲಾಲಿ ॥

ಅಂದಿನಿಂದ ಈ ಮಗುವಿಗೆ ಹಾಲ್ಕುಡಿಸುವಾಗಲೂ ಶಿವಸ್ಮರಣೆ, ಜೋಗುಳ ಹಾಡುವಾಗಲೂ ಶಿವಸ್ಮರಣೆ— ಮಗು ಭೀತಿಯಿಂದ ಚೀರಿದರೂ ಶಿವನಾಮವೇ ರಕ್ಷಾಮಂತ್ರ—ಈ ಬಗೆಯ ತಾಯ್ತಂದೆಯರ ಪೋಷಣೆಯಲ್ಲಿ ಮಗು ಸೊಂಪಾಗಿ ನಳನಳಿಸಿ ಬೆಳೆಯುತ್ತದೆ. ಬೆಳೆಯುತ್ತಿರುವ ಈ ಕಂದನ ಆಟವೂ ಲೋಕದ ರೀತಿಗೆ ಕೊಂಚ ವಿಚಿತ್ರವೆ ?

ಮುತ್ತಿನ ಚೆಂಡುಗಳೊಲ್ಲ ಸುವ್ವಲಾಲಿ ।
ರತ್ನದ ಗೋಲಿಗಳೊಲ್ಲ ಸುವ್ವಲಾಲಿ ॥
ಮತ್ತೆ ಹೊನ್ನ ಬುಗುರಿಯೊಲ್ಲ ಸುವ್ವಲಾಲಿ ॥
ಅತ್ತು ಶಿವಲಿಂಗ ಬೇಡ್ತ್ಯಾನೆ ಸುವ್ವಲಾಲಿ ॥

ಮಾದರಸ, ಮಾದಲಾಂಬಿಕೆಯರು ಬಡವರೋ ಶ್ರೀಮಂತರೊ ನಮ್ಮ ಜಾನಪದ ಕವಿಗೆ ಇದರ ಅರಿವು ಬೇಕಾಗೆ ಇಲ್ಲ, ಅಣ್ಣನವರ ಬಾಲಲೀಲೆ ವರ್ಣಿಸುವತ್ತ ಇವನ ಏಕಾಗ್ರತೆ ! ಮುತ್ತಿನ ಚೆಂಡು, ರತ್ನದಗೋಲಿ ಹೊನ್ನಬುಗುರಿ ಒಂದನ್ನು ಈ ಶಿಶು ಬೇಡವೆಂದು ಎಸೆಯುತ್ತದೆ.

ಆದರೆ ದೇವರ ಸಂಪುಟದಲ್ಲಿಟ್ಟ ಶಿವಲಿಂಗವನ್ನು ಕಾಡಿ ಬೇಡಿ, ರೋದಿಸಿ ಅದನ್ನು ಆಟಕ್ಕೆ ತರುತ್ತಾನೆ. ಈ ಮಗುವಿನ ಆಟವಾದರೂ ಎಂಥಹುದು ?

ಶಿವಲಿಂಗ ಭುಜದಲಿಟ್ಟು ಸುವ್ವಲಾಲಿ |
ಬಗ್ಗಿ ಓಡಾಡು ತಾನೆ ನಲಿವು ಸುವ್ವಲಾಲಿ ||
ಕೆಳಗೇಳು ಲೋಕವೆಂದು ಕೂಗಿ ಸುವ್ವಲಾಲಿ |
ಶಿವನ ಸಂಚಾರವೆಂಬ ನಕ್ಕು ಸುವ್ವಲಾಲಿ ||

ಶಿವಲಿಂಗ ತಲೆಯಲಿಟ್ಟು ಆಗಾಗ ಮೇಲಿನ ಲೋಕದ ಹೆಸರು ಹೇಳುತ್ತ ಕೈಲಾಸದಿಂದ ಶಿವ ಮೇಲಣ ಲೋಕಕ್ಕೆ ಸಂಚಾರ ಬಂದಿದ್ದಾನೆ, ನಾನು ಆತನನ್ನು ಹೊತ್ತೊಯ್ಯುತ್ತಿದ್ದೇನೆ, ಯಾರು ನನ್ನ ಮುಟ್ಟ ಬೇಡಿ ದಾರಿಗಡ್ಡ ಬರಬೇಡಿ ಎಂದು ಕೂಗುತ್ತ ಊರಿನ ಬೀದಿ ಬೀದಿ ಉದ್ದಕ್ಕು ಓಡಿ ಬಿಡುವನು.

ಮಗು ಎಲ್ಲೊ ತಪ್ಪಿಸಿಕೊಂಡು ಹೋಗುವುದೆಂಬ ಅಂಜಿಕೆ ಊರವರಿಗೂ ಇಲ್ಲ, ತಂದೆ ತಾಯಿಗೂ ಇಲ್ಲ, ಏಕೆಂದರೆ—ಎಲ್ಲೆಲ್ಲಿ ಆಡ್ಡಾಡಿದರೂ ಕಡೆಗೆ ಮಗು ಸಂಜೆ ಹೊತ್ತಿಗೆ ಶಿವಾಲಯದಲ್ಲಿ ಶಿವನ ಮುಂದೆ ಅಂಬೆಗಾಲಿಟ್ಟು ಕಣ್ಮುಚ್ಚಿ ಧ್ಯಾನ ಮಾಡುತ್ತ ಕುಳಿತಿರುವುದು.

ತಂದೆ ತಾಯಿ ಅಥವಾ ಊರವರು ಯಾರಾದರೂ ಹೋಗಿ ಎತ್ತಿಕೊಂಡು ಬರುವರು, ಐದು ವರ್ಷ ಸಹ ತುಂಬದ ಈ ಮಗುವಿನ ಬಾಲಲೀಲೆಗಳು ತಾಯಿಗೆ ವಿಚಿತ್ರ ಎನಿಸುವುದು. ಆಗ ತಾಯಿ ಒಮ್ಮೆ ಅಚ್ಚರಿಯಿಂದ ಹೀಗೆ ಪ್ರಶ್ನಿಸುತ್ತಾಳೆ.

ಶಿವಲಿಂಗ ಭುಜದಲಿಟ್ರೆ ಸುವ್ವಲಾಲಿ |
ಕೆಳಗಿನ ಲೋಕಗಳೆಂಬೆ ಸುವ್ವಲಾಲಿ ||
ಶಿವಲಿಂಗ ಶಿರದಲ್ಲಿಟ್ರೆ ಸುವ್ವಲಾಲಿ ||
ಮೇಲಣ ಲೋಕಗಳೆಂಬೆ ಸುವ್ವಲಾಲಿ ||

ಹೀಗೆ ಪ್ರಶ್ನಿಸಿದ ತಾಯಿಗೆ ಬಸವಣ್ಣಾ ಮುಗುಳ್ನಗೆ ತೋರುತ್ತಾನೆ. ಆದರೆ ತಾಯಿ ಬಿಡದೆ ಮತ್ತೆ ಪ್ರಶ್ನಿಸಿ

ಹರನ ಎತ್ತಿ ಒಯ್ಯಲು ಸುವ್ವಲಾಲಿ |
ನರರು ನಮಗೆ ಸಾಧ್ಯವೆ ಸುವ್ವಲಾಲಿ ||
ಧರೆಗೆ ಒಲ್ಲದ ಆಟವೊಕಂದ ಸುವ್ವಲಾಲಿ |
ಈ ಪರಿಗೆ ಕಾರಣ ಉಸರೊ ಸುವ್ವಲಾಲಿ ||

ಲೋಕದಲ್ಲಿ ಯಾವ ಬಾಲಕನು ಆಡದ ಇಂಥ ಆ
ವನ್ನು ನೀನು ಆಡಲು ಕಾರಣ ಹೇಳ ಬೇಕೆಂ
ಹಠಾ ಹಿಡಿಯುತ್ತಾಳೆ. ಆಗ ಬಾಲಕ ಬಸವಣ
ಹೀಗೆನ್ನುತ್ತಾನೆ.

ಆರು ಉಡಿಗೆ ಕೊಟ್ಟರೆ ಸುವ್ವಲಾಲಿ |
ಆರು ಜನ್ಮದ ರಹಸ್ಯ ಪೇಳ್ವೆ ಸುವ್ವಲಾಲಿ ||
ಆರು ತೊಡಿಗೆ ಇಟ್ಟರೆ ಸುವ್ವಲಾಲಿ |
ಆರು ಜನ್ಮದ ರಹಸ್ಯ ಪೇಳ್ವೆ ಸುವ್ವಲಾಲಿ ||

ತನ್ನದು ಆರು ಜನ್ಮದ ರಹಸ್ಯ ಇರುವುದೆಂದು ಆ
ಬಗೆಯ ಉಡಿಗೆ ಕೊಟ್ಟು— ಆರು ಬಗೆಯ ತೊ
ತೊಡಿಸಿದರೆ ಅದನ್ನು ಹೇಳುವೆನೆಂದು ಹೇಳುತ್ತಾ
ತಾಯಿ ಈ ಮಗುವಿನ ಬಯಕೆ ನಡಿಸುತ್ತಾಳೆ.

ಹವಳದಂಗಿ ಪಚ್ಚೆಯಾಗಿ ಸುವ್ವಲಾಲಿ |
ಮುತ್ತಿನಂಗಿ ಮೇಲುಟ್ಟ ಸುವ್ವಲಾಲಿ ||
ನೀಲದಂಗಿ ಕೆಂಪಿನಂಗಿ ಸುವ್ವಲಾಲಿ |
ಮೇಲೆ ವಜ್ರದ ಅಂಗಿಯುಟ್ಟ ಸುವ್ವಲಾಲಿ ||

ಈ ಬಗೆಯ ತೊಡಿಗೆ ತೊಟ್ಟು ಮಗು ತನ್ನು ಆ
ಜನ್ಮದ ರಹಸ್ಯವನ್ನು ಈ ಬಗೆಯಲ್ಲಿ ಹೇಳ ಕೊ
ತ್ತದೆ.

ಪ್ರಥಮದಲಿ ಶಿಲಾದನೆಂದು ಸುವ್ವಲಾಲಿ |
ಸುತ್ತ ಸುತ್ತ ಶಿವನ ಭಕ್ತನಾದೆ ಸುವ್ವಲಾಲಿ ||
ದ್ವಿತಿಯದಲಿ ಸುಹಾಸನೆಂದು ಸುವ್ವಲಾಲಿ |
ಸುತ್ತಿ ಸುತ್ತಿ ಶಿವನಲ್ಲಿದ್ದೆ ಸುವ್ವಲಾಲಿ ||

ಹೀಗೆ ಎರಡು ಜನ್ಮದ ಕಥೆ ಹೇಳುತ್ತಿದ್ದಂತೆ ಎರ
ತೊಡಿಗೆಗಳು ಕಳಚಿ ಮುತ್ತು ಹವಳ ಛಟಲ್ ಛಟಲೆಂ
ಸಿಡಿದು ಉದುರುತ್ತದೆ.

ಮೂರನೆಯ ಜನ್ಮ ನೀಲಲೋಹಿತನೆಂದು ಸುವ್ವಲಾ
ಸಾರಿ ಶಿವನ ಸ್ಮರಿಸುತ್ತಿದ್ದೆ ಸುವ್ವಲಾಲಿ ||
ವೀರ ಮನೋಹರ ನಾಲ್ಕನೆ ಭವದಿ ಸುವ್ವಲಾಲಿ
ದಾರಿ ಹುಡುಕಿದೆ ಶಿವನ ಪಥಕೆ ಸುವ್ವಲಾಲಿ ||

ಈ ವಿವರಣೆಯೊಂದಿಗೆ ನೀಲದಂಗಿ, ಪಚ್ಚೆಯಾಗಿ ಸಿಡಿ

(26 ನೇ ಪುಟ ನೋ

# ಉತ್ತಮ ಬೇಸಾಯಕ್ಕೆ ಸುಧಾರಿಸಿದ ಉಪಕರಣಗಳು

—ಬಿ. ಕೆ. ಶ್ರೀನಿವಾಸಮೂರ್ತಿ.

ಈಗಿನ ವ್ಯವಸಾಯ ಒಂದು ಒಳ್ಳೆಯ ಕಸುಬಾಗಿದೆ. ಮುಂದುವರಿದ ದೇಶಗಳಲ್ಲಿ ಸುಧಾರಿಸಿದ ವ್ಯವಸಾಯ ಕ್ರಮಗಳನ್ನ ನುಸರಿಸಿ ರೈತರು ಹೆಚ್ಚು ಹೆಚ್ಚು ಉತ್ಪಾದಿಸಿ ಒಂದು ಹೊಸ ಅಧ್ಯಾಯವನ್ನು ಸ್ಥಾಪಿಸಿದ್ದಾರೆ. ಅನ್ನದ ಅಭಾವವನ್ನು ಹೋಗಲಾಡಿಸಿದ್ದಾರೆ. ನಮ್ಮ ದೇಶದಲ್ಲಿಯೂ ಅನ್ನದ ಅಭಾವವನ್ನು ಪರಿಹರಿಸಬೇಕಾದರೆ ಉತ್ತಮ ಬೇಸಾಯಕ್ಕೆ ಸುಧಾರಿಸಿದ ಉಪಕರಣಗಳ ಅವಶ್ಯಕತೆ ಬೇಕೆನ್ನುತ್ತಾರೆ ಪ್ರಸ್ತುತ ಲೇಖಕರು. —ಸಂ.

ಈ ಉತ್ಪಾದನೆಗೆ ತಗಲುವ ಖರ್ಚು ಸಮಯ ಕೂಡ ಕಡಿಮೆಯಾಗಿ ವ್ಯವಸಾಯ ಒಂದು ಒಳ್ಳೆಯ ಕಸುಬಾಗಿದೆ. ವ್ಯವಸಾಯದ ಉತ್ಪಾದನೆ, ವ್ಯವಸಾಯದ ಕೆಲಸಗಳ ಸರಿಯಾದ ಉಪಯೋಗದ ಮೇಲೆ ಅವಲಂಬಿಸಿದೆ. ಹೆಚ್ಚಿನ ಉತ್ಪಾದನೆಗೆ ಬೇಕಾಗಿರುವುದು ಸರಿಯಾದ ಸುಧಾರಣೆಯ ಸಲಕರಣೆಗಳು. ಒಂದು ವ್ಯವಸಾಯ ಯಂತ್ರೋಪಕರಣಗಳು ಇನ್ನಿತರೇ ಸಲಕರಣೆಗಳ ಜೊತೆಗೂಡಿ, ವ್ಯವಸಾಯದಲ್ಲಿ ಕೂಲಿಯಾಳುಗಳ ಉತ್ಪಾದನಾ ಶಕ್ತಿಯನ್ನು ಜಾನುವಾರುಗಳ ಉತ್ಪಾದನಾಶಕ್ತಿಯನ್ನೂ ಮತ್ತು ಎಕರೆವಾರು ಉತ್ಪದನಾಶಕ್ತಿಯನ್ನು ಹೆಚ್ಚಿಸುತ್ತಿರುವುದು ಕಂಡು ಬಂದಿದೆ

ಅಮೇರಿಕಾದ ವ್ಯವಸಾಯದಲ್ಲಿ ಹೆಚ್ಚಿನ ಉತ್ಪಾದನೆ $\frac{1}{3}$ ಭಾಗ ಸುಧಾರಿಸಿದ ಯಂತ್ರೋಪಕರಣಗಳಿಂದ, $\frac{1}{3}$ ಭಾಗ ಒಳ್ಳೆಯ ಬೀಜಗಳಿಂದ, ಮತ್ತು $\frac{1}{3}$ ಭಾಗ ರಾಸಾಯನಿಕ ವಸ್ತುಗಳ ಉಪಯೋಗದಿಂದ ಎಂದು ತಿಳಿದುಬಂದಿದೆ.

**ವ್ಯವಸಾಯದ ಯಂತ್ರೋಪಕರಣಗಳ ಉಪಯೋಗ ಈ ರೀತಿ ಇದೆ :**

1. ಸಮಯಕ್ಕೆ ಸರಿಯಾಗಿ ಕೆಲಸ ಮುಗಿಯುತ್ತದೆ.
2. ಕಡಿಮೆ ಸಮಯದಲ್ಲಿ ಹೆಚ್ಚಿನ ಕೆಲಸವಾಗುತ್ತದೆ.
3. ಒಳ್ಳೆಯ ಗುಣಮಟ್ಟದ ಕೆಲಸ ಸಾಧ್ಯವಿದೆ.
4. ರೈತನಿಗೆ ಕೆಲಸ ಸುಲಭವಾಗುತ್ತದೆ.
5. ಕಡಿಮೆ ಕೂಲಿಯಾಳುಗಳ ಖರ್ಚು ಮತ್ತು
6. ಉತ್ಪಾದನೆಯ ಖರ್ಚು ಕಡಿಮೆಯಾಗುತ್ತದೆ.

ಪ್ರಗತಿಶೀಲ ರೈತರಿಗೆ ಸುಧಾರಿಸಿದ ಬೇಸಾಯ ಪದ್ಧತಿ, ಒಳ್ಳೆಯ ಹೆಚ್ಚುವರಿ ಕೊಡುವ ಬೀಜಗಳು ಮತ್ತು ಹೆಚ್ಚಿನ ಬೇಸಾಯ, ಅಷ್ಟೇ ಮುಖ್ಯವಲ್ಲ. ಜೊತೆಗೆ ಒಳ್ಳೆಯ ಯಂತ್ರೋಪಕರಣಗಳು ಬೇಕು. ಇವು ಎತ್ತಿನಿಂದ ಎಳೆಯಲ್ಪಟ್ಟರವು ಆಗಿರಬಹುದು ಅಥವಾ ಟ್ರಾಕ್ಟರ್ ಅಥವಾ ಇನ್ನೇತರೇಗಳಿಂದ ಎಳೆಯಲ್ಪಟ್ಟವು ಆಗಿರಬಹುದು. ನಮ್ಮ ರೈತರು ಇನ್ನೂ ಹಳೆಯ ಕಾಲದ ಉಪಕರಣಗನ್ನೇ ಉಪಯೋಗಿಸುತ್ತಿದ್ದಾರೆ. ಇವುಗಳ ಸಹಾಯದಿಂದ ಕೆಲಸ ನಡೆಸಲು ಸಮಯ ಜಾಸ್ತಿ ಬೇಕು. ಮತ್ತು ಬಹಳ ಖರ್ಚು ಜಾಸ್ತಿಯಾಗಿ ಕಾಲಕ್ಕೆ ಸರಿಯಾಗಿ ಭೂಮಿ ತಯಾರಾಗುತ್ತಿಲ್ಲ, ಬಿತ್ತನೆಯಾಗುತ್ತಿಲ್ಲ; ಕಳೆನಾಶಕವಾಗುತ್ತಿಲ್ಲ ಮತ್ತು ಕೊಯ್ಲು, ಇನ್ನಿತರೇ ಕೆಲಸಕಾರ್ಯಗಳು ಆಗುತ್ತಿಲ್ಲ. ಆದುದರಿಂದ ದೇಶದ ವಿವಿಧ ಕೃಷಿ ವಿಶ್ವವಿದ್ಯಾನಿಲಯದಲ್ಲಿ ಮತ್ತು ಇನ್ನಿತರೇ ಸಂಶೋಧನಾ ಕೇಂದ್ರಗಳಲ್ಲಿ ಈ ವಿಷಯದಲ್ಲಿ ಸಂಶೋಧನೆ ನಡೆಸಿ, ಒಳ್ಳೆಯ ಸುಧಾರಿಸುವ ಯಂತ್ರೋಪಕರಣಗಳನ್ನು ರೈತರಿಗೆ ತಯಾರಿಸಿದ್ದಾರೆ. ವಿವಿಧ ಕೆಲಸಕಾರ್ಯಗಳಿಗೆ ಸೂಕ್ತವಾದ ಯಂತ್ರೋಪಕರಣಗಳ ಬಗ್ಗೆ ಮುಂದೆ ತಿಳಿಸಲಾಗಿದೆ.

1. ಮೊದಲನೆ ಉಳುಮೆ :

ಬಿತ್ತನೆಗೆ ಭೂಮಿ ಸಿದ್ಧತೆಯಾಗಬೇಕಾದರೆ ಮೊದಲನೆ ಉಳುಮೆ ಸರಿಯಾಗಿ ಆಗಬೇಕು. ಅಂದರೆ ಮಣ್ಣು ಸರಿಯಾಗಿ ಪುಡಿಯಾಗಿ, ಹೆಂಟೆ ಇಲ್ಲದಿರಬೇಕು. ಸಾಕಷ್ಟು ಗಾಳಿ ಓಡಾಟಕ್ಕೆ ಅವಕಾಶವಾಗಿರಬೇಕು. ಸೊಪ್ಪು, ಬೇರು ಇನ್ನಿತರೆ ವಸ್ತುಗಳು ಮಣ್ಣಿನಲ್ಲಿ ಮುಚ್ಚಿ ಹೋಗಿರಬೇಕು. ಮತ್ತು ಭೂಮಿಗೆ ಹಾಕಿದ ಗೊಬ್ಬರಗಳು ಸರಿಯಾಗಿ ಮಣ್ಣಿಗೆ ಸೇರಿಕೊಂಡಿರಬೇಕು. ಈ ಕೆಲಸಕ್ಕೆ ಕಬ್ಬಿಣದ ನೇಗಿಲು ಉತ್ತಮವಾದುದು. ಕಬ್ಬಿಣದ ನೇಗಿಲಿನಲ್ಲಿ ಎರಡು ತರಹ ಇದೆ. ಮೊದಲನೆಯದು ರೆಕ್ಕೆನೇಗಿಲು, ಎರಡನೆಯದು ತಟ್ಟೇ ನೇಗಿಲು. ರೆಕ್ಕೆನೇಗಿಲನ್ನು ಸಾಕಷ್ಟು ಮಳೆಯಾಗತಕ್ಕಂತ ಜಾಗದಲ್ಲಿ ಉಪಯೋಗಿಸುವುದು ಸಾಮಾನ್ಯ. ರೆಕ್ಕೆನೇಗಿಲುಗಳಲ್ಲಿ ಎರಡು ತರಹ ಇದೆ. ಎಡಕ್ಕೈ ನೇಗಿಲುಗಳು ಮತ್ತು ಬಲಕ್ಕೈ ನೇಗಿಲುಗಳು. ಉಳುಮೆ ಮಾಡುವಾಗ ಮಣ್ಣನ್ನು ಎತ್ತಿ ಹಾಕುವ ದಿಕ್ಕಿನ ಮೇಲೆ ಎಡಗೈ ಮತ್ತು ಬಲಗೈ ನೇಗಿಲುಗಳು ಎಂದು ವಿಂಗಡಣೆ ಮಾಡಿದೆ. ಸಾಮಾನ್ಯವಾಗಿ ನಮ್ಮಲ್ಲಿ ಬಳಕೆ ಇರುವುದು ಬಲಗೈ ನೇಗಿಲು. ಇದು ಮಣ್ಣನ್ನು ಬಲಕ್ಕೆ ಎತ್ತುಹಾಕುವುದು. ನಮ್ಮಲ್ಲಿ ಎತ್ತುಗಳನ್ನು ಯಾವಾಗಲೂ ಎಡಕ್ಕೆ ತಿರುಗುವಂತೆ ಅಭ್ಯಾಸ ಮಾಡಿರುವುದರಿಂದ ಎಡಗೈ ನೇಗಿಲುಗಳು ಬಳಕೆಯಿಲ್ಲ. ಕೆಂಪುಮಣ್ಣಿನ ಭೂಮಿಯಲ್ಲಿ ಗದ್ದೆ ನೆಲದಲ್ಲಾಗಲಿ, ಅಥವಾ ಒಣಭೂಮಿಯಲ್ಲಾಗಲಿ, ಕೆ. ಎಲ್ ನೇಗಿಲು ಬಹಳ ಉಪಯೋಗಕಾರಿ. ಈ ನೇಗಿಲಿನಲ್ಲಿ ಸುಧಾರಣೆ ಮೈಸೂರು ಬಾರ್ ಪಾಯಿಂಟ್ ನೇಗಿಲು. ಬಾರ್‌ಪಾಯಿಂಟ್ ಇದರ ಒಂದು ವಿಶೇಷ ಅಂಶ. ಈ ಬಾರ್‌ಪಾಯಿಂಟ್ ಇರುವುದರಿಂದ ನೇಗಿಲಿನ ರೆಕ್ಕೆ ಸವೆಯದೆ ಸಮಯವಾದಂತೆ ಬಾರ್‌ಪಾಯಿಂಟ್ ಸವೆದು ಅದನ್ನು ಮಾತ್ರ ಬದಲಾಯಿಸಬೇಕಾಗುತ್ತದೆ. ಆದುದರಿಂದ ಸ್ವಲ್ಪ ಖರ್ಚಿನಲ್ಲಿ ಉಳಿತಾಯ ಆಗುತ್ತದೆ. ಇವುಗಳು ಕೆಂಪು ಮಣ್ಣಿನಲ್ಲಿ ಮತ್ತು ಮರಳು ಮಣ್ಣಿನಲ್ಲಿ ಬಹಳ ಉಪಯೋಗಕಾರಿ. ಎರಡು, ಮೂರು ಜೊತೆ ಎತ್ತುಗಳ ಸಹಾಯದಿಂದ ಉಳುಮೆ ಮಾಡಲು ಸಾಧ್ಯವಾಗುವಂತಹ ದೊಡ್ಡ ದೊಡ್ಡ ನೇಗಿಲನ್ನು ಕಪ್ಪು ಮಣ್ಣಿನಲ್ಲಿ ಮೊದಲನೆ ಉಳುಮೆಗೆ ಉಪಯೋಗಿಸಬಹುದು.

ಒಣ ಹವೆಯಿರುವಂತಹ ಜಾಗದಲ್ಲಿ, ಕಲ್ಲು ಇರತಕ್ಕಂತಹ ಒರಟಾದ ಜಮೀನಿನಲ್ಲಿ ಉಳುಮೆಗೆ ಸೂಕ್ತವಾದದ್ದು ತಟ್ಟೆನೇಗಿಲು. ಜಿಗಟು, ಜಾಗು ಮತ್ತು ಇನ್ನಿತರೇ ಕಷ್ಟದ ಸಂದರ್ಭಗಳಲ್ಲಿಯೂ ಸಹ ಈ ನೇಗಿಲನ್ನು ಉಪಯೋಗಿಸಿ ಉಳುಮೆ ಮಾಡಬಹುದು. ನಮ್ಮ ದೇಶದಲ್ಲಿ ಎತ್ತಿನಿಂದ ಎಳೆಯತಕ್ಕಂತಹ ತಟ್ಟೆ ನೇಗಿಲು ಇನ್ನೂ ತಯಾರಾಗುತ್ತಿಲ್ಲ. ಮರದ ನೇಗಿಲಿಗೆ ಹೋಲಿಸಿದರೆ ಕಬ್ಬಿಣದ ನೇಗಿಲಿನಿಂದ ಇಷ್ಟು ಉಪಯೋಗಗಳಿವೆ.

1. ಮರದ ನೇಗಿಲು ಮಣ್ಣನ್ನು ಕೆದಕುವ ಕೆಲಸವನ್ನೊಂದೇ ಮಾಡುವುದು. ಆದರೆ ಕಬ್ಬಿಣದ ನೇಗಿಲು ಮಣ್ಣನ್ನು ಕೆದುಕುವುದಲ್ಲದೆ, ಮಣ್ಣನ್ನು ಪೂರ್ತಿಯಾಗಿ ಎತ್ತಿ ಹೊರ ಹಾಕುತ್ತದೆ.

2. ಮರದ ನೇಗಿಲಿನಿಂದ ಉತ್ತರೆ ಕೆಲವು ಜಾಗ ಉಳುಮೆಯಾಗದೆ ಉಳಿಯುಬಹುದು. ಆದ್ದರಿಂದ ಪ್ರತಿಯೊಂದು ಪ್ರದೇಶವು ಉಳುಮೆಯಾಗಬೇಕಾದರೆ 3–4 ಸಲ ಉಳುಮೆಯಾಗಬೇಕಾಗುತ್ತದೆ. ಆದರೆ ಕಬ್ಬಿಣದ ನೇಗಿಲಿನಿಂದ ಒಂದೇ ಉಳುಮೆಗೆ ಈ ಕೆಲಸವನ್ನು ಮಾಡಬಹುದು.

**ಬಿತ್ತನೆಗೆ ಮುಂಚೆ ಉಳುಮೆ ನಂತರದ ಕೆಲಸ ಕಾರ್ಯಗಳು :**

ತಟ್ಟೆ ಕುಂಟೆಗಳು ಉಳುಮೆಯಾದ ಭೂಮಿಯಲ್ಲಿರುವ ಹೆಂಟೆಯನ್ನು ಪುಡಿಮಾಡಲು ಬಹಳ ಒಳ್ಳೆಯ ಸಾಧನ. ಈ ಕುಂಟೆಗಳನ್ನು ಅಂಟಾದ ಗಟ್ಟಿ ಮಣ್ಣಿನಲ್ಲಿಯೂ ಭೂಮಿಯ ಮೊದಲನೆಯ ಉಳುಮೆಗೆ ಉಪಯೋಗಿಸಲು ಸಾಧ್ಯವಿದೆ. ತಟ್ಟೆ ಕುಂಟೆಗಳು ದೊರಕದಿದ್ದಲ್ಲಿ ಕೆ. ಎಂ. ಕಲ್ಟಿವೇಟರ್ ಬಹಳ ಉತ್ತಮ ಉಪಕರಣ. ಇದು ಈಗ ಹಳ್ಳಿಗಳಲ್ಲಿ ದೊರಕುತ್ತಿರುವ ಹಲುಬೆಯ ಸುಧಾರಿತ ಸಾಧನ. ಇದನ್ನು ಸಹ ಮೊದಲನೇ ಉಳುಮೆಗೆ ಕೆಲವು ಸಂದರ್ಭಗಳಲ್ಲಿ ಉಪಯೋಗಿಸಬಹುದು. ಉತ್ತರ ಕರ್ನಾಟಕದಲ್ಲಿ ಬಹಳ ಪ್ರಸಿದ್ಧಿಯಾಗಿರುವುದು ಬ್ಲೇಡ್ ಕುಂಟೆ. ಇದರ ಸಹಾಯದಿಂದ ಕಳೆಯನ್ನು ತೆಗೆಯಲು ಮತ್ತು ಮೊದಲ ಉಳುಮೆಯನ್ನು ಕೆಲವು ತರಹದ ಮಣ್ಣಿನಲ್ಲಿ ಸುಲಭವಾಗಿ ಮಾಡಬಹುದು.

ಮೇಲೆ ಹೇಳಿದ ಉಪಕರಣಗಳು ಹಳೆಯ ಹಲುಬೆಗಳು ಮತ್ತು ಕುಂಟೆಗಳಿಂದ ಕೆಲಸವನ್ನು ಕಡಿಮೆ ಸಮಯದಲ್ಲಿ, ಕಡಿಮೆ ಖರ್ಚಿನಲ್ಲಿ ಸುಲಭವಾಗಿ ಮಾಡುತ್ತವೆ.

ಬಿತ್ತನೆ :

ಚೆಲ್ಲುವಿಕೆ ಮತ್ತು ಊರುವ ವಿಧಾನಗಳಿಗೆ ಹೋಲಿಸಿದರೆ ಕೂರಿಗೆಯಿಂದ ಬಿತ್ತನೆ ಮಾಡುವುದು ಬಹಳ ಒಳ್ಳೆಯದು. ಇದರಿಂದ ಹೆಚ್ಚು ಇಳುವರಿಯನ್ನು ಕಡಿಮೆ ಖರ್ಚಿನಲ್ಲಿ, ಕಡಿಮೆ ಸಮಯದಲ್ಲಿ, ಕಡಿಮೆ ಕೂಲಿಗಳ ಸಹಾಯದಿಂದ ಪಡೆಯಬಹುದು. ಜೊತೆಗೆ ಗೊಬ್ಬರವನ್ನು ಸಹ ಬೀಜಕ್ಕೆ ಸ್ವಲ್ಪ ದೂರದಲ್ಲಿ ಮತ್ತು ಆಳದಲ್ಲಿ ಬೀಳುವ ಹಾಗೆ ಹಾಕಲು ಸಾಧ್ಯತೆಯಿರುವ ಕೂರಿಗೆಗಳು ದೊರೆಯುತ್ತವೆ. ಇದರಿಂದ ಗೊಬ್ಬರದ ಸರಿಯಾದ ಉಪಯೋಗ ಆಗುತ್ತದೆ.

ಹತ್ತಿ, ಮುಸುಕಿನಜೋಳ, ಶೇಂಗಾ ವನ್ನು ಒಂದು ಸಾಲಿನಲ್ಲಿ ಊರಲು ಸಾಧ್ಯವಾಗುವಂತಹ ಪ್ಲಾಂಟರ್‌ಗಳು ದೊರೆಯುತ್ತವೆ. ಧಾನ್ಯ ಬಿತ್ತನೆ ಮಾಡುವಂತಹ 3 ಸಾಲು, 4 ಸಾಲು ಬೀಜ ಗೊಬ್ಬರ ಹಾಕುವ ಕೂರಿಗೆಗಳು ಕೂಡ ದೊರೆಯುತ್ತವೆ. ಅಂದರೆ ಬಿತ್ತನೆ ಮಾಡುವ ಉಪಕರಣಗಳು ಸಾಮಾನ್ಯವಾಗಿ ಎಲ್ಲಾ ಬೆಳೆಗೂ ಉಪಯೋಗಿಸುವಂತವುಗಳು ಮಾರುಕಟ್ಟೆಯಲ್ಲಿದೆ. ಈ ಕೆಲವು ಕೆಳಗೆ ತಿಳಿಸಿದ ಕಾರಣಗಳಿಂದ ಕೂರಿಗೆ ಉಪಯೋಗಿಸಬಹುದ ; ಚೆಲ್ಲುವುದಕ್ಕಿಂತ ಉಪಯೋಗಕಾರಿ ಎಂತ ಹೇಳಬಹುದು.

1. ಬಿತ್ತನೆಯ ಆಳವನ್ನು ನಿಯಂತ್ರಿಸಬಹುದು.
2. ಕಡಿಮೆ ಬೀಜ ಸಾಕಾಗುತ್ತದೆ.
3. ಕಳೆ ನಿಯಂತ್ರಣ ಸುಲಭ ಮತ್ತು
4. ಹೆಚ್ಚು ಇಳುವರಿ.

ಬದುಗಳನ್ನು ಹಾಕುವುದು ಮತ್ತು ಸಾಲು ಮಾಡುವಿಕೆ :

ಎತ್ತುಗಳಿಂದ ಎಳೆಯಲ್ಪಡಲು ಸಾಧ್ಯವಿರುವಂತಹ ಅಂತಹ ಹೆಸರಿನ ಉಪಕರಣವು ಕಾಲುವೆ ಮಾಡುವುದಕ್ಕೆ, ವಿವಿಧ ಗಾತ್ರದ ಸಾಲು ಮಾಡುವುದಕ್ಕೆ ಉತ್ತಮವಾದ ಉಪಕರಣ. ಇದನ್ನು ಮುಸುಕಿನ ಜೋಳ, ಆಲೂಗೆಡ್ಡೆ, ಕಬ್ಬು ಇತ್ಯಾದಿ ಬೆಳೆಗಳಲ್ಲಿ ಸಾಲುಮಾಡಿ ಬಿತ್ತನೆ ಮಾಡುವುದಕ್ಕೆ ಉಪಯೋಗಿಸಬಹುದು. ಈ ಉಪಕರಣದಿಂದ ಸಾಲು ಮಾಡುವುದಕ್ಕೆ, ಕಾಲುವೆ ಮಾಡುವುದಕ್ಕೆ ಬೇಕಾಗುವ ಸಮಯವನ್ನು ಕಡಿಮೆ ಮಾಡಬಹುದು. ಬಂಡ್‌ಫಾರ್ಮರ್ ಅನ್ನುವುದು ಒಂದು ಬದು ಹಾಕಲಿಕೆ ಉಪಯೋಗವಾಗುವ ಉಪಕರಣ. ನೀರಾವರಿ ಜಮೀನಿನಲ್ಲಿ ಆಲೂಗೆಡ್ಡೆ, ಕಬ್ಬು ಬೆಳೆಗಳಲ್ಲಿ ಇವುಗಳನ್ನು ಉಪಯೋಗಿಸಬಹುದು. ಹೊಲಗಳಲ್ಲಿ ನೀರನ್ನು ಪಡೆದು ಮತ್ತು ತಡೆದಿಡಲು, ಅದರಿಂದ, ಮಣ್ಣಿನ ಕೊರೆತ ತಪ್ಪಿಸುವ ಕಾಲುವೆಗಳನ್ನು ಮತ್ತು ಬದು ಹಾಕಲು ಇದು ಬಹು ಸೂಕ್ತವಾದ ಉಪಕರಣ. ಅದೂ ಅಲ್ಲದೆ ಇದರಿಂದ ಸಮಯವನ್ನು ಉಳಿಸಿ ಕಡಿಮೆ ಖರ್ಚಿನಲ್ಲಿ ಕಾಲುವೆಗಳನ್ನು ಸುಲಭವಾಗಿ ಮಾಡಬಹುದು.

ಬತ್ತದ ಗದ್ದೆ :

ಬತ್ತದ ಗದ್ದೆಯಲ್ಲಿ ಮಣ್ಣನ್ನು ಚೆನ್ನಾಗಿ ಕೆಸರು ಮಾಡುವುದು, ಬತ್ತ ಬೆಳೆಯುವ ಜಾಗಗಳಲ್ಲಿ ಸಾಮಾನ್ಯವಾದ ಪದ್ಧತಿಯಾಗಿದೆ. ಹೆಚ್ಚು ಇಳುವರಿ ಕೊಡುವ ತಳಿಗಳಿಗೆ ಒಳ್ಳೆಯ ಕೆಸರು ಗದ್ದೆ ಮಾಡುವುದು ಮುಖ್ಯ. ಈ ಉಪಕರಣಗಳಿಂದ ಹೆಚ್ಚು ನೀರಿನಲ್ಲಿ ಮಣ್ಣನ್ನು ಚೆನ್ನಾಗಿ ಉಳುವುದೇ ಕೆಸರು ಗದ್ದೆ ಮಾಡುವುದು ಎಂದು ಹೇಳಬಹುದು. ಈ ಕಾರ್ಯದ ಮುಖ್ಯ ಉದ್ದೇಶ ನೀರಿನ ಇಂಗುವಿಕೆಯನ್ನು ತಪ್ಪಿಸುವುದು, ಕಳೆಯನ್ನು ರಾಸಾಯನಿಕ ಕ್ರಿಯೆಯಿಂದ ನಾಶಮಾಡುವುದು ಮತ್ತು ಮಣ್ಣನ್ನು ಹದ ಮಾಡಿ ನಾಟಿ ಮಾಡಲು ಸಹಾಯವಾಗುವಂತೆ ಮಾಡುವುದು. ಈ ಕೆಲಸಕ್ಕೆ ದಕ್ಷಿಣ ಭಾರತದಲ್ಲಿ, ತೆರೆದಂತಹ ಪಡ್ಲರ್‌ಗಳು ಸೂಕ್ತವಾದುದು ಒಂದು ದಿನದಲ್ಲಿ ಒಬ್ಬ ಮನುಷ್ಯ ಮತ್ತು ಒಂದು ಎತ್ತಿನ ಸಹಾಯದಿಂದ ಈ ಪಡ್ಲರ್ ಉಪಯೋಗಿಸಿ, 2-3 ಎಕರೆ ಜಮೀನನ್ನು ಕೆಸರು ಗದ್ದೆಯಾಗಿ ಮಾಡಬಹುದು. ತೋಟಗಳಲ್ಲಿ ಹೆಂಟೆ ಹೊಡೆಯುವುದಕ್ಕೂ ಕೂಡ ಇದನ್ನು ಉಪಯೋಗಿಸಬಹುದು.

ನಾಟಿ ಮಾಡುವ ಯಂತ್ರ :

ನಾಟಿ ಮಾಡುವುದು ವ್ಯವಸಾಯದಲ್ಲಿ ಒಂದು

ಬಹಳ ಸಮಯ ತೆಗೆದುಕೊಳ್ಳುವ ಮತ್ತು ಬಹಳ ಕೂಲಿಯಾಳುಗಳು ಮಾಡುವ ಕೆಲಸ. ಈಗಿನ ಕಾಲದಲ್ಲಿ ಸೂಕ್ತ ಸಮಯದಲ್ಲಿ ಕೂಲಿಯಾಳುಗಳ ಅಭಾವ ಕಂಡುಬಂದು ಈ ಕೆಲಸಮಾಡುವುದು ಬಹಳ ಕಷ್ಟವಾಗಿ ಕೆಲವು ಸಂದರ್ಭಗಳಲ್ಲಿ ಇಳುವರಿ ಕಡಿಮೆಯಾಗುವುದು ಕಂಡುಬಂದಿದೆ. ಜೊತೆಗೆ ಓದಿರುವ ಮಂದಿ ಈ ಕೆಲಸ ಮಾಡುವುದಕ್ಕೆ ಹಿಂಜರಿಯುತ್ತಿದ್ದಾರೆಂದು ತಿಳಿದುಬಂದಿದೆ. ಇಷ್ಟೆಲ್ಲ ಅವರೂ ಕೂಡ ನಾಟಿ ಮಾಡುವುದು ಹೆಚ್ಚು ಇಳುವರಿಗೆ ಒಂದು ದಾರಿಯಾಗುತ್ತಿರುವುದರಿಂದ ನಾಟಿಮಾಡುತ್ತಿರುವ ಪ್ರದೇಶದ ವಿಸ್ತೀರ್ಣ ಜಾಸ್ತಿ ಆಗುತಿದೆ. ಆದುದರಿಂದ ನಾಟಿ ಮಾಡುವ ಯಂತ್ರ ಒಂದು ಬೇಕಾಗಿದೆ. ಬತ್ತ ನಾಟಿಮಾಡುವುದಕ್ಕೆ ಒಂದು ಯಂತ್ರ ಈಗ ಮಾರುಕಟ್ಟೆಯಲ್ಲಿ ಬಂದಿದೆ. ಇದಕ್ಕೆ ಅನ್ನಪೂರ್ಣ ನಾಟಿ ಯಂತ್ರ ಎಂದು ಹೆಸರು ಕೊಟ್ಟಿದ್ದಾರೆ. ಪ್ರಪಂಚದಲ್ಲಿ ಮನುಷ್ಯ ಚಾಲಿತ ನಾಟಿ ಯಂತ್ರ ಎಂದರೆ ಇದೊಂದೇ ಎಂದು ಹೇಳಬಹುದು. ಇದರ ಸಹಾಯದಿಂದ ಬತ್ತದ ಸಸಿಗಳನ್ನು ಸಾಲಿನಲ್ಲಿ ಸೂಕ್ತ ಆಳದಲ್ಲಿ ಸರಿಯಾದ ಅಂತರದಲ್ಲಿ ನಡೆಸಲು ಸಾಧ್ಯವಿದೆ. ಇದರಿಂದ ಕೂಲಿಯಾಳುಗಳನ್ನು ಪೂರ್ತಿಯಾಗಿ ಕಡಿಮೆ ಮಾಡಲು ಸಾಧ್ಯವಿಲ್ಲವಾದರೂ ಕೂಡ ಕೂಲಿಯಾಳುಗಳ ಕೆಲಸದ ಸಾಮರ್ಥ್ಯ ಹೆಚ್ಚಿ ಅವರ ಕಷ್ಟ ಕಡಿಮೆಯಾಗುತ್ತದೆ. ಒಂದು ದಿವಸದಲ್ಲಿ ಇದರ ಜೊತೆಗೆ ಮೂರು ಜನರ ಸಹಾಯದಿಂದ ಅರ್ಧ ಎಕರೆ ನಾಟಿಮಾಡಬಹುದು.

### ಭೂಮಿ ಮಟ್ಟಮಾಡಲು ಸಾಧನ :

ಭೂಮಿ ಮಟ್ಟಮಾಡಲು ಒಳ್ಳೆಯ ಬೆಳೆಗೆ ಮೊಟ್ಟ ಮೊದಲನೆಯ ಹೆಜ್ಜೆ. ಭೂಮಿ ಮಟ್ಟವಾಗಿದ್ದರೆ ಮಾತ್ರ ನೀರು ಸಮನಾಗಿ ಹರಿಯಲು, ಹಾಕಿದ ಎಲ್ಲಾ ಗೊಬ್ಬರಗಳೂ ಸರಿಯಾಗಿ ಹಂಚಿ ಹೋಗಲು ಮತ್ತು ಎಲ್ಲಾ ಬೇರೆ ಕೆಲಸ ಮಾಡಲು ಸಾಧ್ಯವಾಗುತ್ತದೆ. ಮಟ್ಟವಾಗಿದ್ದರೆ ನೀರಿನಿಂದ ಭೂಮಿ ಕೊರೆದು ಜಾಗು ಪ್ರದೇಶವಾಗಲು ಸಾಧ್ಯವಿಲ್ಲ. ಮರದ ಅಥವಾ ಕಬ್ಬಿಣದ ಬಕ್ ಸ್ಕ್ರೇಪರ್ ಭೂಮಿ ಮಟ್ಟ ಮಾಡಲು ಬಹಳ ಉತ್ತಮವಾದ ಸಾಧನ. ಸಣ್ಣ ರೈತರು ಕೂಡ ಇದನ್ನು ಕೊಂಡು ತಮಗೆ ಕಾಲಾವಕಾಶವಾದಾಗ ಕೂಲಿಯಾಳುಗಳ ಅವಶ್ಯಕತೆ ಇಲ್ಲದೆ ಸುಲಭವಾಗಿ ಭೂಮಿ ಮಟ್ಟ ಮಾಡಿಕೊಳ್ಳಬಹುದು. ಇದು ಬಹು ಸುಲಭವಾ
ಮತ್ತು ಹೆಚ್ಚು ಸಾಮರ್ಥ್ಯದ ಎತ್ತಿನಿಂದ ಎಳೆಯಲ್ಪ
ಬಲ್ಲಂಥ ಸಾಧನ. ಭೂಮಿ ಮಟ್ಟಮಾಡಬೇಕೆಂದಿರು
ಜಾಗದಲ್ಲಿ ಮೊದಲು ಉಳುಮೆ ಮಾಡಿ ಮಣ್ಣು ಮಾ
ಕೊಂಡು, ಆಮೇಲೆ ಇದನ್ನು ಉಪಯೋಗಿಸಿದಲ್ಲಿ ಮಟ್ಟ
ಮಾಡುವ ಕೆಲಸ ಸಮರ್ಪಕವಾಗಿ ಆಗುತ್ತದೆ. ಇದ
ಸಹಾಯದಿಂದ ಭೂ ಸಂರಕ್ಷಣಾ ಕೆಲಸವಾದಂ
ಕಾಂಟೂರ್ ಒಡ್ಡು ಹಾಕಲು ಸಾಧ್ಯವಿದೆ.

### ಮಧ್ಯಂತರ ಬೇಸಾಯ :

ರಿಡ್ಜರ್ ಅನ್ನು ಕೂಡ ಈ ಕೆಲಸಕ್ಕೆ ಉಪಯೋಗಿಸಲು
ಸಾಧ್ಯವಿದೆ. ಕಲ್ಟಿವೇಟರ್ ಅಥವಾ ತಳ್ಳುವ ಅಥವಾ
ಎಳೆಯುವ ಕುಂಟೆ ಇವುಗಳ ಸಹಾಯದಿಂದ ಸುಲಭ
ವಾಗಿ ಸಾಲಿನ ಬೆಳೆಗಳಲ್ಲಿ ಕಳೆಯನ್ನು ತೆಗೆದು ಮಣ್ಣನ್ನು
ಸಡಿಲಿಸಬಹುದು. ಬತ್ತದ ಗದ್ದೆಯಲ್ಲಿ ಸಾಲು ನಾಟಿ
ಮಾಡಿದಲ್ಲಿ ಕಳೆ ತೆಗೆಯಲು ಉತ್ತಮವಾದ ಸಾಧನ
ರೋಟರಿ ವೀಡರ್. ಇದರ ಸಹಾಯದಿಂದ ಒಂದು ದಿವ
ಸಕ್ಕೆ ಸುಮಾರು ಮುಕ್ಕಾಲರಿಂದ ಒಂದು ಎಕರೆ ಕ
ತೆಗೆಯಬಹುದು. ಇದು ಬಹಳ ಸುಲಭವಾದ ಸಾಧನ
ವಾಗಿದ್ದು ಎರಡು ಮೂರು ಸಲ ಕಳೆ ತೆಗೆಯಲು ಬಹ
ಉಪಯೋಗಕಾರಿಯಾಗಿದೆ. ಕಳೆಗಳು ಹುಟ್ಟುತ್ತಿರುವಾ
ಗಲೇ ಇದನ್ನು ಉಪಯೋಗಿಸಲು ಸಾಧ್ಯವಿರುವುದರಿಂ
ಕಳೆಯಿಂದ ಬೆಳೆಗೆ ಆಗುವ ಹೆಚ್ಚಿನ ಹಾನಿಯನ್ನು ತಪ್ಪಿ
ಸಬಹುದು. ಇದರಿಂದ ಕಳೆಯು ನಿರ್ಮೂಲವಾಗುವುದ
ಲ್ಲದೆ. ಕಳೆ ಅಲ್ಲೆ ಮಣ್ಣಿನಲ್ಲಿ (ನೀರಿನಲ್ಲಿ) ಮುಚ್ಚಿ ಹೋಗಿ
ಕೆಲವು ದಿವಸಗಳಲ್ಲಿ ಕೊಳೆತು ಗೊಬ್ಬರವಾಗುತ್ತದೆ
ಜೊತೆಗೆ ಭೂಮಿ ಹೆಚ್ಚಿಗೆ ಸಡಿಲವಾಗುತ್ತದೆ. ಮೊದಲ
ಕಳೆ ತೆಗೆಯುವ ಕಾರ್ಯಕ್ಕೆ ಶಿವಮೊಗ್ಗ ಮತ್ತು ಇತರೆ
ಹತ್ತಿರಬರುವ ಸ್ಥಳಗಳಲ್ಲಿ, ಎತ್ತಿನಿಂದ ಎಳೆಯಲ್ಪಡುವ
ವೀಡರ್ ಉಪಕರಣ ಬಳಕೆಯಲ್ಲಿದೆ ಈ ಉಪಕರಣ
ಉಪಯೋಗಿಸಲು ಸಾಲು ನಾಟಿಯೇ ಬೇಕೆಂದು ಮತ್ತು
ಪುಣಜಿ ಬೆಳೆಯಲ್ಲಿಯೂ ಕೂಡ ಇದನ್ನು ಉಪಯೋಗಿ
ಬಹುದು. ಇದರ ಸಹಾಯದಿಂದ ದಿನಕ್ಕೆ 2-4 ಎಕ
ಕಳೆ ತೆಗೆಯಲು ಸಾಧ್ಯವಿದೆ ಎಂದು ತಿಳಿದುಬಂದಿದೆ. ಕ

(19 ನೇ ಪುಟ ನೋಡಿ

# 'ನನ್ನಿನ್ನ ನಿನ್ನಳುವಿಗೆ ಕಾರಣ ?'

— ಟಿ. ಎಂ ಸುಬ್ಬರಾಯು

ಮದುವೆ-ಮಸಣ, ಹುಟ್ಟು-ಸಾವು; ಏಕಾಂಗಿಯಾಗಿದ್ದಾಗ ಹೀಗೆ ಎಲ್ಲ ಸಂದರ್ಭಗಳಲ್ಲಿಯೂ ನಿಮಗಿಂತ ನಿಮ್ಮ ಮಡದಿ ಹೆಚ್ಚು ಅಳುತ್ತಾರೆ. ಇದಕ್ಕೆ ಕಾರಣ ...................? ಹಾಗಾದರೆ ಈ ಲೇಖನವನ್ನು ಓದಿರಿ —ಸಂ

ಕಾಲೇಜಿನಲ್ಲಿ ನನ್ನ ಮಾಮೂಲಿ 'ಕೊರಿತ' ಮುಗಿಸಿ ಮನೆಗೆ ಮರಳಿದಾಗ ನನ್ನ ಮನೋರಮೆ ಗೀತಾಳ ಮುಗುಳ್ನಗುವಿನ ಸ್ವಾಗತದ ಬದಲು ಅಳುಮೋರೆಯ ಸ್ವಾಗತ ದೊರಕಿದ್ದು ಹೊಸ ಅನ್ವೇಷಣೆಗೆ ನಾಂದಿಯಾಯಿತು. 'ಅರೇ---ಯಾಕೆ ಅಳುತ್ತಿದೀಯೆ ?' ಎನ್ನುವ ಪ್ರಶ್ನೆಯನ್ನು ವಿವಿಧ ಸ್ವರ, ಭಾವ, ಭಂಗಿಗಳಲ್ಲಿ ಹೊರಡಿಸಿ, ವಿಚಾರಿಸಿದರೂ, ನನ್ನಾಕೆಯ ಅಳುವಿನ ಕಾರಣ ನನ್ನಿಂದ ತಿಳಿದು ಕೊಳ್ಳಲಾಗಲಿಲ್ಲ. ನನ್ನ ಅರಗಿಣಿಯ ಅಳುವಿಗೆ ಯಾವ ಕಾರಣ ಇರಬಹುದು ಎಂದು ಯೋಚಿಸುತ್ತಾ ಕುಳಿತಾಗ ದೊರೆತದ್ದು. ಬ್ರಹ್ಮ ಪ್ರತಿಯೊಬ್ಬರ ನೆತ್ತಿಯಲ್ಲೂ ಒಂದೊಂದು ನಳವನ್ನು ಜೋಡಿಸಿದ್ದಾನೆ; ತೀರಾ ತುರ್ತು ಪರಿಸ್ಥಿತಿಯಲ್ಲಿ ಮಾತ್ರಾ ಬಿರುಡೆ ತಿರುಗಿಸಿ ಅಗತ್ಯವಿದ್ದಷ್ಟೇ ನೀರನ್ನು ಗಂಡಸು ಆ ನಳದಿಂದ ಪಡೆಯಬಲ್ಲ. ಹೆಂಗಸು ಹಾಗಲ್ಲ. ಅಗತ್ಯವಿರಲಿ, ಇಲ್ಲದಿರಲಿ ಸದಾಕಾಲ ನಳದಿಂದ ನೀರು ಒಸರುತ್ತಲೇ ಇರುವಂಥಾ ನಳಗಳನ್ನು ಪಡೆದ ಭಾಗ್ಯಶಾಲಿನಿಯರು ಅವರೆ ! ಹೀಗಾಗಿ, ಹೆಂಗಸರು ತಮ್ಮ ಕಾಲಾವಧಿಯ ಹೆಚ್ಚಿನ ವೇಳೆಯನ್ನು ಅಳುವುದಕ್ಕಾಗಿಯೇ ವಿನಿಯೋಗಿಸುತ್ತಾರೆ. ಮತ್ತು ಗಂಡಸರು ಅದೇ ಅವಧಿಯನ್ನು ಆ ಹೆಂಗಸರು ಯಾಕೆ ಅಳುತ್ತಿದ್ದಾಳೆ ಎಂದು ತಿಳಿದುಕೊಳ್ಳಲು ವಿನಿಯೋಗಿಸುತ್ತಿದ್ದಾರೆ. ಈ ಕುರಿತು ನನಗೆ ಹೊಳೆದುದೇ ಸರಿ ನನ್ನ ಈ 'ಅನ್ವೇಷಣೆ'ಯನ್ನು ಒರೆಹಚ್ಚಿ ನೋಡಲಾರಭಿಸಿದೆ.

ನೋಡುವಾ ಎಂದುಕೊಂಡು, ಅದೇ ರಾತ್ರಿ ಮುಸುಮುಸು ಅತ್ತಂತೆ ಮಾಡಿದೆ. ನಿಜವಾಗಿ ನಟಿಸಿದೆ ಎಂದರೂ ಸೈ. ಆ ಅಳುವಿಗೆ ನನ್ನಾಕೆ ಕಾರಣ ಕೇಳುವ ಗೋಜಿಗೆ ಹೋಗುವುದಿರಲಿ; ಬಿಟ್ಟಳು ವಾಗ್ಬಾಣ. 'ಏನ್ರಿ---ಗಂಡಸರಾಗಿ ನಾಚಿಕೆ ಆಗುಲ್ಲವಾ ನಿಮಗೆ ಅಳೋಕೆ ? ಹೆಣ್ಣಾಗಿ ಹುಟ್ಟಬೇಕಾಗಿತ್ತು ನೀವು---ಏಳಿ ಸಾಕು!— ಆಗಲೆ ರಾತ್ರಿ ಹತ್ತಾಯಿತು ಘಂಟೆ. ಮಲಗಿ. ನಾಳೆ ಸಂತೆ. ಮುಂಜೆ ತರಕಾರಿ ಮಾರ್ಕೆಟ್‌ಗೆ ಹೋಗ್‌ಬೇಕು. ಒಂಬತ್ತಕ್ಕೆ ಎದ್ದು ಚೀಲ ಹಿಡಿದು ಹೊರಟು, ಕೊಳತು-ಪಳತು ತಂದು ನನ್ ಜೀವ ಹಿಂಡಬೇಡಿ ಬನ್ನಿ'

ಅದೇ ಮಾರನೆಯ ದಿನ ಸೈಕಾಲಜಿ ಲೆಕ್ಚರರ್ ಕೋಣೆಯಲ್ಲಿ ನನ್ನ ಪ್ರಶ್ನಾಭಂಗಿ ಮೋರೆ; 'ಹೆಂಗಸಿನ ಅಳುವಿಗೂ ಗಂಡಸಿನ ಅಳುವಿಗೂ ಇರುವ ವ್ಯತ್ಯಾಸ ಹಾಗೂ ಕಾರಣಗಳು ಏನು ?' ಪಿಸ್ಕಾಲಜಿಯವರ ಉತ್ತರ; 'ಗಂಡಸಿನ ಅಳುವಿಗೆ ನೂರೆಂಟು ಕಾರಣ ಇರುವುದೇ ಇಲ್ಲ. ದುಃಖ ಒತ್ತರಿಸಿ ಬಂದಾಗ, ಅದನ್ನು ಹತ್ತಿಕ್ಕುವ ಸಂಯಮ ಇಲ್ಲದ ಅಪರೂಪದ ಗಂಡಸು ಅತ್ತಾನು ಅಷ್ಟೆ! ಆದರೆ ಗಂಡಸಿನ ಅಳು ಸರಸ್ವತೀ ನದಿ ಇದ್ದಹಾಗೆ. ಅಗೋಚರ ಪ್ರವಾಹವಾದ್ದರಿಂದ ಅದಕ್ಕೆ ಲಕ್ಷ ಪೂರೈಸುವ ಮಂದಿ ತೀರಾ ಕಡಿಮೆ. ಆದರೆ, ಹೆಂಗಸಿನ ಅಳು ಈ ಬಗೆಯದೆಂದು ಹೇಳಲಾಗಲ್ಲ. ದುಃಖದಿಂದ ಯಾವುದಾದರೊಬ್ಬ ಹೆಂಗಸು ಅಳುತ್ತಾಳೆನ್ನುವ ತೀರ್ಮಾನಕ್ಕೆ ಬರುವುದು ಶುದ್ಧ ತಪ್ಪು. They can cry, because they are mad or beause they ary glad.' ಇನ್ನೂ ವಿಶೇಷವೆಂದರೆ; ನನ್ನ ಹೆಂಡತಿಯು

ವಿಷಯ ಹೇಳುತ್ತೇನೆ. ಆಕೆ ಆಗೀಗ ಅಳುತ್ತಾಳೆ. ಕಾರಣ ಕೇಳಿದರೆ ಹೇಳುವುದಿಲ್ಲ. ರಮಿಸುತ್ತಿರುವಾಗ ಕೇಳಿದರೆ 'ಏನೋರಿ, ನಂಗೆ ಗೊತ್ತಿಲ್ಲ' ವೆಂದು ಉಣುಚಿಕೊಳ್ಳಲು ಯತ್ನಿಸುತ್ತಾಳೆ. ಒತ್ತಾಯ ಮಾಡಿಯೋ, ಮುನಿಸು ನಟಿಸಿಯೋ ಕೇಳಿದರೆ 'ನಿಜಾ ಅಂದರೆ__ ಏನು ಕಾರಣ ವೂ ಇಲ್ಲ. ಸುಮ್ಮನೆ ಅಳಬೇಕು ಅನ್ನಿಸ್ತು, ಅತ್‌ಬಿಟ್ಟೆ' ಎನುತ್ತಾಳೆ. ಇದಕ್ಕೆ ಏನನ್ನುತೀರಿ ನೀವು ಹೇಳಿ.'

ಈ ಹೆಂಗಸರ ಅಳುವಿನ ಬಗ್ಗೆ ಸಂಶೋಧನೆ ನಡೆಸುವ ವಿಚಿತ್ರ ಹಂಬಲ ಬೆಳೆದದ್ದು ನನಗೆ ಇತ್ತೀಚಿಗೆ. ಸಂಶೋಧನೆಯ ಅಗತ್ಯ ಕಂಡದ್ದು ಈ ಪ್ರಶ್ನೆ ನನ್ನಲ್ಲಿ ಮೂಡಿದಾಗ ಇದ್ದಕ್ಕಿದಂತೆಯೇ ಹೆಣ್ಣು ಕಣ್ಣಂಚಿನಲ್ಲಿ ಕಂಬನಿ ತುಳುಕಿತೆಂದರೆ ಆ ಹೆಣ್ಣಿನ ಸಮಾಸವರ್ತಿಯಾದ ಗಂಡಸು ಏನು ಮಾಡಬೇಕು ಅಥವಾ ಸಹಜವಾಗಿ ಆತ ಅಂಥ ಸಂದರ್ಭಗಳಲ್ಲಿ ಏನು ಮಾಡುತ್ತಾನೆ ? ನನ್ನ ವಿಷ ಯವನ್ನೇ ನಾನು-ಅದೇನೋ ಇಂಟರಾಸ್ಪೆಕ್ಷನೆಯನ್ನು ಸೆಲ್ಫ್ ಅಬ್ಸರ್‌ವೇಶನನ್ನೋ ಅಂಥಾದ್ದಲ್ಲ-ಹಾಗೆ ಮಾಡಿ ನೋಡಿದ ನನ್ನ ಗೀತ ಅಳುವಾಗಲೆಲ್ಲ ಸ್ವಾಭಾವಿಕವಾಗಿ 'ಅಳಬೇಡ, ಸುಮ್ನಿರೆ ಮಹರಾಯ್ತಿ. ಹೆಂಗ್ಸ ಅಳೋದನ್ನ ನೋಡೊ ಕಾಗುಲ್ಲ' ಎಂಬ ಪ್ರತಿಕ್ರಿಯೆ ಹೊರಡಿಸುತ್ತೇನೆ ಅದಕ್ಕೆ ಉತ್ತರವನ್ನೂ ನಿರೀಕ್ಷಿಸಿರುತ್ತೇನೆ; ' ಅಳದೆ ಮತ್ತೇನು ಮಾಡಲಿ ನಿಮ್ಮನ್ನು ಕಟ್ಟಿಕೊಂಡು.' ಹೀಗೆ ಒಂದೆರಡು ಬಾರಿ ಅನ್ನಿಸಿಕೊಂಡ ಮೇಲೆ ಹೊಸ ವರಸೆ ಹಚ್ಚಿ ನೊಡೋಣ ಎನ್ನಿಸಿತು. 'ನಿನ್ನ ಅಳುವಿನ ಕಾರಣವಾ ನರೂ ಏನು ನನ್ನ ಚಿನ್ನಾ....' ಎಂದು ರಮಿಸುವ ಭಾವ, ಭಾಷೆ ಮೂಡಿಸಿದೆ. ನಾಕ್ ನಾಕ್ ನಿಮ್ಮ ಬಡಿವಾರ .... ಇದು ನಾಟಕ ಸ್ಟೇಜಲ್ಲ— ' ಎಂದು ದಭಾಯಿಸಿದ ಗೀತ ನೊರಸೊರ ಮುಂದುವರಿಸಿಳು. ಮೆಥಡ್ ಛೇಂಜ್ ಮಾಡಿದೆ. 'ನಾಕ್ ಮಾಡು ನಿನ್ನ ರಾಗ ಕೇಳೋಕಾಗುಲ್ಲ' ರೇಗುವ ಧ್ವನಿಗೆ ಸೊರಸೊರ ದೂರವಾಯಿತು ಅಷ್ಟೆ; ಆದರೆ ಜೋರಾಗಿ ಕೇಳಿಸುವುದಕ್ಕೆ ಅನುವೂ ದೊರೆಯುದಿ ರಲಿಲ್ಲ. ಅದರಿಂದ ಒಂದು ನಿಯಮವೂ ರೂಢಿಯಲ್ಲಿ ಬಂತು. ಇತ್ತಿತ್ತಲಾಗಿ, ಆಕೆ ಅಳಲು ಆರಂಭಿಸಿದಾಗಲೆಲ್ಲಾ ನನಗೇನೋ ಬೇರೆ ಕೆಲಸದ ಗರ್ಜಿ ಇರುವವನಂತೆ, ಅವಸ ರವಸರವಾಗಿ ಅವಳಿಗೊಂದಿಷ್ಟು ಬೈದು ಹೊರಟು ಬಿಡು ತ್ತೇನೆ. ಅಲ್ಲವೇ ಮತ್ತೆ: ಅಳುವ ಮಡದಿಯನ್ನು ನೋಡು ತ್ತಾ, ಆ ಅಳುವಿನ ಕಾರಣ ತಿಳಿಯಲು ಶ್ರಮಿಸುತ್ತ ದಶರಥನಾಗಲು ನನ್ನಿಂದ ಸಾಧ್ಯವೆ ?

ಮೊನ್ನೆ ಮೊನ್ನೆ ಯಾವುದೋ ಪುಸ್ತಕ ಮುಗು ಹಾಕುತ್ತಿದ್ದೆ. ಒಂದು ವಾಕ್ಯ ನನ್ನ ಗಮನ ಸೆಳೆಯಿತು ಅಥವಾ 'ಅಳು' ವಿನ ಗುಂಗಿನಲ್ಲಿಯೇ ಇದ್ದ ನನ್ನ ಮ ಸ್ಸಿಗೆ ಆ ವಾಕ್ಯವೇ ಪಥ್ಯವಾಯಿತು. 'ಅಳುವ ಗಂಡನನ ನಂಬಬಾರದು' ಎನುವ ಗಾದೆಯ ವಾಕ್ಯವದು. ಹೌ ಅಳುವ ಹೆಂಗಸನ್ನು ನಂಬಬಾರದೆಂದು ಎಲ್ಲಿಯೂ ನೋ ಲ್ಲ. ಯಾಕೆ ಅಳುವ ಹೆಂಗಸನ್ನು ನಂಬಬಾರದೆನ್ನುವುದ ನನಗೆ ಕೊಡಲೇ ತಿಳಿಯಲಿಲ್ಲ. ನೋಡಿಯೇ ಬಿಡುವ ಎಂದುಕೊಂಡು, ನೀದಾ ನನ್ನ ಭಾರ್ಯೆಯನ್ನು ಬ ಮಾಡಿಕೊಂಡು ' ಆ ದಿನ ಅಳುತ್ತಾ ಇದ್ದೆಯಲ್ಲಾ ಅದ ಕಾರಣವೇನು ? ನಂಬುವಂಥಾ ಕಾರಣವೇ ' ಎಂದ ಪ್ರಶ್ನಿಸಿದೆ. ನನ್ನಾಕೆಯು ಅಳುವಿನ ಮೂಲ ಕಾರಣ ಕಂಡ ಹಿಡಿದು ಈ ಗಾದೆ ಸುಳ್ಳುಮಾಡುವ ಚಪಲ ನನ್ನದು ಅಂತೆಯೇ ಸಹಜ ಕುತೂಹಲ ಪ್ರದರ್ಶಿಸಿದ್ದಕ್ಕೆ ನನ್ನಾ ಯ ಉತ್ತರ ಏನು ಗೊತ್ತಾ ?; ' ಅಂತೂ ಈಗಲಾದರು ಅದನ್ನು ತಿಳಿಯುವ ಮನಸ್ಸಾಯಿತಲ್ಲ.' ಹೌದು ಗಾದೆ ವೇದಕ್ಕೆ ಸಮ.

ಅಂತೂ ಇಷ್ಟು ತಿಳಿಯುತ್ತದೆ. ಹೆಂಗಸರ ಅಳ ವಿಗೆ ನಿರ್ದಿಷ್ಟ ಕಾರಣವೂ ಇಲ್ಲ; ಕ್ಲುಪ್ತ ಕಾಲ ಹಾಗು ನಿಶ್ಚಿತ ಜಾಗ ಕೂಡ ಇಲ್ಲ. ಯಾವ ವೇಳೆಯಲ್ಲಾದರು ಆಕೆ ಅಳಬಲ್ಲಳು. ಯಾವ ವ್ಯಕ್ತಿಯ ಇದಿರಾದರೂ ಅವಳ ಕಣ್ಣೀರು ಹರಿಸಬಲ್ಲಳು. ತಮಿಳು ಸಿನಿಮಾಗಳಲ್ಲಿ ದಿಢಿ ರನೆ ಪ್ರತ್ಯಕ್ಷವಾಗುವ ದೇವರಂತೆ ಕರೆದಾಗ ಬರುವ ದೇವತೆ ''ಅಳು" ನನ್ನ ಸಂಶೋಧನೆಯ ಮುಕ್ತಾಫಲ ಇವು.

ಮದುವೆಯಂಥ ಶುಭ ಸಮಾರಂಭದಲ್ಲಿ ಹೆಣ್ಣು ಅಳುತ್ತಾಳೆ ಗೊತ್ತಲ್ಲಾ ? ಸ್ಮಶಾನ ಯಾತ್ರೆಗೆ ಹೊ ಟಾಗಲಂತೂ ಅಳಲೇ ಬೇಕಲ್ಲಾ ! ಇನ್ನೂ ವಿಶೇಷವೆಂದ ಯಾರೋ ಅಳುತ್ತಾರೆಂದು ಕೆಲವು ಹೆಂಗಸರು ತಾವು ಅಳುತ್ತಾರೆ. ಇದನ್ನಂತೂ ಉದಾಹರಣೆ ಸಹಿತ ಸಾಬೀತು ಮಾಡುತ್ತೇನೆ. ಒಂದು ದಿನ ಹೀಗೇ ಕಾಲೇಜ್ ಕಾ ಡಾರ್‌ನಲ್ಲಿ ಸುತ್ತು ಹಾಕುತ್ತಿದ್ದೆ ಲೇಡಿಸ್ ವೆಯಿಟಿಂಗ್

ನಿಂದ ನಾಲ್ಕಾರು ಮಂದಿಯ ಸೊರ ಸೊರ ಸದ್ದು ಕೇಳಿಸಿತ್ತು. 'ಏನಾಯಿತು?' ಎಂದು ಕೇಳಿದರೆ, 'ಅವಳು' ವಳು ಒಬ್ಬಳು 'ಅಕೋ ಆಕೆ' ಎಂದಳು ಇನ್ನೊಬ್ಬಳು ಮಲಳನ್ನು ಪ್ರಶ್ನಿಸಿದರೆ ಕಮಲಳ ಹೆಸರು. ಕಮಲ ನ್ನು ಕೇಳಿದರೆ ಫಿಲೋಮಿನಳನ್ನು ಕೇಳಬೇಕು. ನೆಗೂ ತಿಳಿದದ್ದು ಇಷ್ಟು. ಕ್ಲಾಸ್‌ನಲ್ಲಿ ಮೇಡಂ ಯ್ದಿದ್ದಕ್ಕೆ ಶ್ಯಾಮಲಳೋ ಯಾವಳೋ ಅತ್ತಳಂತೆ. ಇಡೀ ಅವಳ ಪರಿವಾರದ ಮೂಗು ಕೆಂಪೋ ಕೆಂಪು.

ನನ್ನ ನೆರೆಮನೆಯ ಮ್ಯಾನೇಜರರ ಮಗ ತುಂಬಾ ಟಿ. ಆತ ಒಂದು ಸಂಜೆ ಮನೆಗೆ ಬಂದವನೇ ನನ್ನೆ ರು ಹೊಸ ಸುದ್ದಿಯ ಗಂಟು ಬಿಚ್ಚಿದ. 'ಪ್ರೊಫೆಸರ್ರೆ ನಮ್ಮ ಮೇಡಂ ಇವತ್ತು ಅತ್ತರು ಗೊತ್ತಾ?" ಯಾಕೆ?" ಅಂದದ್ದಕ್ಕೆ ಆತನ ನಿರೂಪಣೆ 'ಹೀಗೆ.... ಲಾಗಿ ದಿನವೂ ನಿಂತು ಪ್ರಾರ್ಥನೆ ಮಾಡಬೇಕು. ಹೊತ್ತು ಅವೇ ಅದಿನ ನಮ್ಮನೆಗೆ ಬಂದಿದ್ರಲ್ಲ ಒಬ್ಬ ಮೇಲರು ಅವರ ಮಗಳು ಲೈನ್ ತಪ್ಪಿ ನಿಂತ್‌ಬಿಟ್ಲು ಮ್ಮ ಮೇಡಂ. ಕನ್ನಡಕ ತೆಗೆದು, ಕಣ್ಣೀರು ಬರೆಸ್ಕೋತಾ ರು .... ಅವಳಿಗೆ ಬಯ್ದರು ಅದಕ್ಕೆ ನಾವು ರ್ಮಾನಮಾಡಿತೀವಿ ನಾಳೆಯಿಂದ ಎಲ್ಲರೂ ಸಾಲು ಸಿ ನಿಂತು ಮೇಡಂ ಜೋರಾಗಿ ಅಳೋದು ಡ್ ಬೇಕೂಂತ."

ಇದಿರು ಬೀದಿಯಲ್ಲಿ ಒಬ್ಬ ಶಾಲಾ ಮಾಸ್ತರರಿ ರೆ. ತಿಂಗಳಿಗೊಮ್ಮೆ ಅವಳು ಅಳುತ್ತಾಳೆ. ಕಾರಣ ಯಬೇಕೆಂಬ ನನ್ನ ಕುತೂಹಲಕ್ಕೆ ನನ್ನ ಅರ್ಧಾಂಗಿ ಮ್ಮಕೆಷ್ಟು ಸ್ಸರಿ ಏಕಚಕ್ರ ನಗರದಲ್ಲಿ ಒಬ್ಬ ಮುದುಕಿ ತ್ತಿದ್ದುದರ ಕಾರಣ ತಿಳಿಯಲು ಇನ್ನೊಬ್ಬ ಮುದುಕಿ ರಟಂತೆ. ಕನ್ನಡಶಾಲಾ ಮಾಸ್ತರರ ಹೆಂಡತಿ ಅಳುತ್ತಿ ದರ ಕಾರಣ ತಿಳಿಯಲು ಕಾಲೇಜ್ ಮಾಸ್ತರರ ಹೆಂಡತಿ ೀದಳು. ಫಲಿತಾಂಶ ತಿಳಿದದ್ದು ಗಂಡನಿಗೆ ಪಗಾರ , ಮನೆಗೆ ಬೇಕಾದ ಸಾಮಾನು ತಂದಾಗ ಅಳುವ ಪಾಟ ಆ ಮಾಸ್ತರರ ಮಡದಿಯದು. ಯಾವದಿನ ಳು ಅತ್ತಳೋ ಆ ದಿನ ಮಾಸ್ತರರಿಗೆ ಪಗಾರ ಸಿಕ್ಕಿದೆ ರ್ಥ. ಯಾಕಿದು ಎಂದು ಕೂಲಂಕಷವಾಗಿ ವಿಚಾರಿಸಿ ಗಿ ತಿಳಿದಂಶ. ತಾನು ಹೇಳಿದಷ್ಟು ಪ್ರಮಾಣದಲ್ಲಿ ಡ ಸಾಮಾನು ತಂದಿಲ್ಲವೆಂಬುದಕ್ಕೆ ಅವಳ ಅಳು.

'ಏನ್ರಿ ಸುಬ್ಬರಾಯರೇ... ಒಬ್ಬರೇ ಸಿನಿಮಾಕ್ಕೆ ಬಂದಿದೀರಲ್ಲ' ನಾನು ಫಿಲಂಗೆ ಭೇಟಿಕೊಟ್ಟಾಗಲೆಲ್ಲಾ ನನ್ನ ಪರಿಚಿತರ ವಿಷಾದದ ಮಾತು. ಮದುವೆಯಾದ ಮೊದಲಿಗೆ 'ಯಾಕೋ ಅವರವರಲ್ಲಿ ಸರಿ ಇಲ್ಲಾಂತ ಕಾಣ್ಸತ್ತೆ. ಪಿಕ್ಚರ್‌ಗೆ ಒಬ್ರೆ ಬಂದಿದ್ರು' ಎಂದೂ ಗುಸುಪುಸ ಆರಂಭವಾಗಿದ್ದುದುಂಟು. ನಿಜವೆಂದರೆ ಅಂಥಾ ದ್ದೇನೂ ಇಲ್ಲ ... ನನ್ನವಳೊಂದಿಗೆ ಸಿನಿಮಾಕ್ಕೆಹೋಗಲು ನಂಗೆ ತುಂಬಾ ಭಯ ಮತ್ತು ಬಹಳ ಸಂಕೋಚ ಕಾರಣ ತಾನು ಕೊಂಡೊಯ್ದು ಕರ್ಚೀಫ್ ಒದ್ದೆಯಾಗಿ ನನ್ನ ಕಿಸೆಯಲ್ಲಿರುವ ಕರ್ಚೀಫನ್ನೂ ಕೇಳಿದರೆ.... ಸಂಕೋಚ ಏಕೆ ಎಂದರೆ ಮರಳಿ ಬಂದಮೇಲೂ ದಿನಗಟ್ಟಲೆ, ಆ ಸಿನಿಮಾ ಗುಂಗಿನಲ್ಲಿಯೇ ಕಣ್ಣು, ಮೂಗು ಕೆಂಪಾಗಿಸಿ ಕೊಂಡಿದ್ದು, ಯಾರಾದರೂ ಗೆಳೆಯರೋ. ಇನ್ಯಾರೋ ಬಂದಾಗ ಅವಳ ಈ ಬೈರೂಪ ನೋಡಿ ಏನೆಂದುಕೊಂಡಾ ರು ಎಂಬುದಕ್ಕೆ!

ಹೆಂಗಸರ ಅಳುವಿನ ಬಗ್ಗೆ ನಡೆಸಿದ ನನ್ನ ಆಸ ಕ್ತಿಯ ಈ ಸಂಶೋಧನೆ ಕೆಲವು ಅನುಕೂಲಗಳನ್ನು ನನ್ನ ಪಾಲಿಗೆ ಒದಗಿಸಿದೆ. ಅದನ್ನಿಷ್ಟು ನಿಮ್ಮೆದುರು ಇಡು ತ್ತೇನೆ. ನೀವೂ ಅನುಸರಿಸಿ, ಫಲ ಪಡೆಯಿರಿ. ತುಸು ವಿಳಂಬವಾಯಿತು ಮನೆಗೆ ಬರುವುದು ಮನೆಯೊಳಗೆ ಕಾಲಿಟ್ಟ ಕೂಡಲೇ ಗೀತಾಬಾಯಿಯವರು ತರಾಟೆಗೆ ತೆಗೆದುಕೊಳ್ಳುತ್ತಾರೆ 'ಅಲ್ಲಾ, ಲೇಟಾಗುತ್ತೇಂತ ಮೊದ ಲೇ ತಿಳಿಸಬಾರದಿತ್ತೆ? ಫೋನ್ ಕಳಿಸಿದ್ದರೂ ಆಗ್‌ತಿತ್ತು; ಫೋನ್ ಮಾಡಿದ್ರೂ ನಡೀತಿತ್ತು ಇದಿರುಮನೆಗೆ. ನೋಡಿ ಮಾಡಿದ್ದೆಲ್ಲಾ ಆರಿ ಅಂಗಾರವಾಯಿತು; ಕೊನೆಯ ಶಬ್ದ ಗಳಿಗೆ ಬರುವಾಗ ಮೂಗಿನಲ್ಲಿ ಸೊರಸೊರದ ಸದ್ದೂ ಹೊರಡುತ್ತದೆ. ಆಗ ನಾನು ಅವಳನ್ನು ನಿರ್ಲಕ್ಷಿಸುವು ದಿಲ್ಲ, ಹಾಗೆಂದು ರಮಿಸುವುದೂ ಇಲ್ಲ. ಒಂದು ವೇಳೆ 'ಹೌದ್ ಕಣೇ ಚಿನ್ನಾ ಲೇಟಾಗಿಹೋಯ್ತು ತಪ್ಪಾಯ್ತು ಕಣೇ ಇನ್ನೆಂದೂ ಲೇಟ್‌ಮಾಡಲ್ಲ; ಇಲ್ಲ ತಿಳಿಸ್ತೀನಿ ಹಾಗಾಗೋದಿದ್ದರೆ' ಎಂದು ರಮಿಸಿದೆನೋ, ದೊಡ್ಡ ತಪ್ಪುಗೈದಂತೆ. 'ಸಾಕ್ ಸಾಕ್ ಈ ಚಿನ್ನ ಒಬ್ಬಳಿದಾ ಳೇಂತ ಈ ಮೊದಲು ನೆನಪಾಗಲಿಲ್ಲವೊ?' ಎನ್ನುವರೀಕೆ ಗ್ಯಾರಂಟಿ. ಇಂಥ ವೇಳೆಗಾಗಿ ಒಂದು ಮದ್ದು ಕಂಡು ಹಿಡಿ ದಿದ್ದೇನೆ. 'ಲೇಟಾಗುತ್ತೇಂತ ಮೊದಲು....' ಎನ್ನುವ ಅವಳ ಪ್ಲೇಟು ಹಚ್ಚಿದ ಕೂಡಲೇ 'ಹೌದೆ ತುಸು

ಲೇಟಾಯ್ತು; ಎಂದು ಗಂಭೀರವಾಗಿ ಹೇಳಿ, ಬಟ್ಟೆ ತೆಗೆದಿರಿಸಿ, ಲುಂಗಿ ಸುತ್ತುವ ಭರಾಟೆಗೆ ತೊಡಗುತ್ತೇನೆ. ವಿಚಿತ್ರವೆಂದರೆ, ಮತ್ತೈದು ನಿಮಿಷಗಳಲ್ಲಿ ನನ್ನಾಕೆ ಸರಿಯಾಗಿ ಬಿಡುತ್ತಾಳೆ. ಯಾಕೆ ಈ ನಡಾವಳಿ ಎಂದು ನನಗೀಗ ಅರ್ಥವಾಗಿದೆ. ಆಕೆ ತುಸುಮಟ್ಟಿಗೆ 'ಅಪ್–ಸೆಟ್' ಆಗಿ ಬಿಟ್ಟಿದ್ದಾಳೆ ಅಷ್ಟೆ. ಆ 'ಅಪ್-ಸೆಟ್ ಮೂಡ್' ಟೆಂಪೊರರಿ ತಾನೆ! ಅದನ್ನು ಸರಿಪಡಿಸುವ ಟೆಕ್ನಿಕ್ ಗೊತ್ತಿರಬೇಕಷ್ಟೆ!

ನಿಮ್ಮ ಮಡದಿಯನ್ನು ಬಹಳವಾಗಿ ನೀವು ಪ್ರೀತಿಸಬೇಡಿ. ಒಂದು ವೇಳೆ ಪ್ರೀತಿಸಿದರೂ, ಹಾಗೆಂದು ಮಡದಿ ಇದಿರು ಬಾಯಿ ಬಿಡಬೇಡಿ. ಯಾಕೆನ್ನುವಿರಾ ನನ್ನ ಅರ್ಧಾಂಗಿಯ ಇದಿರು ಒಂದು ರಾತ್ರಿ ಹೀಗೆ ಅಂದೆ ಜೊತೆಗೆ ಅವಳ ಮೇಲಿನ ನನ್ನ ಪ್ರೀತಿಯ ವಿಷಯವನ್ನೆಲ್ಲಾ ತೋಡಿಗೊಂಡೆ. ಜಗ್ಗನೆ ಅಳು ಶುರು! ನಾನು ಕಂಗಾಲು! ವಿಚಾರಿಸಿದ್ದಕ್ಕೆ ಆಕೆ ಏನೆಂದಳು 'ನೀವು ತೋರಿಸುವ ಇಷ್ಟು ಪ್ರೀತಿಗೆ ನಾನು ಅರ್ಹಳೆ?" ನಾನು ಮತ್ತೆ ಅವಳನ್ನು ಅರ್ಹಳೆಂದು ಪ್ರಮಾಣೀಕರಿಸಿ ಒಪ್ಪಿಸಿದೆ. ಒಪ್ಪಿ ನಗು ತೇಲಿತು ನನ್ನಾಕೆಯ ವದನಗಳಲ್ಲಿ. ಆಗ ಮತ್ತೆ ನನ್ನ ಪ್ರೀತಿಯ ಆಳದ ಬಗ್ಗೆ ವ್ಯಾಖ್ಯಾನ ಮುಂದುವರಿಸಿದೆ. ಈಗಿನ ಅಳು ಹಿಂದೆಂದೂ ಕಂಡರಿಯದಂಥಾದ್ದು! ಜಲಧಾರೆಗೆ ಕಾರಣವನ್ನು ವಿಶೇಷ ಪರಿಶ್ರಮದಿಂದ ತಿಳಿದಾಗ ನಾನು ಸ್ತಂಭೀಭೂತ. ಈಗಿನ ಅಳುವಿಗೆ ಕಾರಣವೇನು, ಗೊತ್ತಾ; 'ಈ ನಿಮ್ಮ ಪ್ರೀತಿ ನನ್ನ ಮೇಲೆ ಶಾಶ್ವತವಾಗಿ ಉಳಿಯುತ್ತದೆಯೋ ಅಂತ ಸಂಶಯ.'

ಅಳದೆ ಉಳಿದು, ಅಳಿದ ಒಬ್ಬ ಹೆಂಗಸ[...] ದರೂ ನೀವು ಹೆಸರಿಸಬಲ್ಲಿರಾ? ಕ್ಲಿಯೋಪಾತ್ರ ಅ[...] ವೆಂದು ನೀವು ಸಾಧಿಸಬಲ್ಲಿರಾ? ಜಾನ್ಸಿಯ ರಾಣಿ [...] ಲಿಲ್ಲವೆಂದು ಯಾವ ಇತಿಹಾಸಕಾರ ಬರೆದಿದ್ದಾ[...] ತೆನ್ನಾಲಿ ರಾಮಕೃಷ್ಣನ ಹೆಂಡತಿ ಅಳದ ಹೆಂಗಸು ಎಂ[...] ಎಲ್ಲಾದರೂ ಓದಿದ ನೆನಪುಂಟಾ? ನಿಮ್ಮ ಅಮ್ಮ ಅ[...] ಇಲ್ಲವೆಂದು ಸುಳ್ಳು ಹೇಳುವ ಧೈರ್ಯ ನಿಮಗುಂಟಾ[...]

ಅಳುವಿನ ಸ್ಪರ್ಧೆಯೊಂದನ್ನೇಕೆ ಏರ್ಪಡಿಸಬ[...] ದೆಂದು ನಾನು ಯೋಚಿಸುತ್ತಿದ್ದೇನೆ. ತಿರುಕುಳವಿನ[...] ತಾರಾಮತಿ, ದ್ರೌಪದಿ, ಸೀತೆಯರ ಪ್ರಲಾಪ ಕಾವ[...] ಲ್ಲಾಯಿತು. ಅಂಥಮಂದಿ ಇಂದೂ ಸಿಗಬಹುದು. ಬ[...] ಮಾನ ಕೊಡುವುದೇ ಸಮಸ್ಯೆಯಾದೀತೇನೋ ಎಂ[...] ಸುಮ್ಮನಿದ್ದೇನೆ.

ಆದ್ದರಿಂದ ಇಷ್ಟು ಹೇಳಿಬಿಡುತ್ತೇನೆ. ಮದು[...] ಮಸಣ, ಹುಟ್ಟು ಸಾವು ಎಲ್ಲಾ ಸಂದರ್ಭಗಳಲ್ಲಿಯ[...] ಹೆಂಗಸು ಅಳುತ್ತಾಳೆ. ಏಕಾಂಗಿಯಾಗಿರುವಾಗಲ[...] ಅವಳು ಅಳುತ್ತಾಳೆ; ಜೊತೆಯವರಿದ್ದಾಗಲೂ ಅ[...] ನಿಲ್ಲಿಸುವುದಿಲ್ಲ!

ಇನ್ನೂ ವಿಶೇಷವೆಂದರೆ ಗಂಡ ಬದುಕಿರು[...] ಗಲೂ ಅಳುತ್ತಾಳೆ; ಸತ್ತಾಗಲೂ ಅಳುತ್ತಾಳೆ. ಅ[...] ವುದು ಹೆಂಗಸರ ಆಗಲೋ ಈಗಲೋ ಜನ್ಮಸಿದ್ಧ ಹಕ್ಕು[...]

---

ಪಂಚ ವಿಧವೇ ಪಂಚ ಬ್ರಹ್ಮವೆಂದು ಅರುಹಿದ
ಮಹಾಮಹಿಮ ಸಂಗನ ಬಸವಣ್ಣನು
ಎನಗೆಯೂ ಗುರು, ನಿನಗೆಯೂ ಗುರು
ಜಗವೆಲ್ಲಕ್ಕೆಯೂ ಗುರು ಕಾಣಾ, ಗುಹೇಶ್ವರಾ. —ಪ್ರಭುದೇವ

ಪಾಷಂಡಿ ಭೂಮಿಯೊಳು ಶಿವಭಕ್ತಿಯನಾರಂಭಿಸಿ
ಸಾಮರ್ಥ್ಯವುಂ ಬಿತ್ತಿ, ಪ್ರತ್ಯಕ್ಷಂಗಳಂ ಬೆಳೆದು
ಗಣಪರ್ವಗಳ ಸುಫಲಂ ಮಾಡಲೆಂದು ಬಂದ
ಕಾರಣಿಕ ಬಸವ, ನಿನ್ನದೆಸೆಯಿಂದ ಎಮ್ಮ ಭಕ್ತಿ ಬಣ್ಣವೇರಿತ್ತು. —ಹರಿಹರ

---

ತೆಗೆಯುವ ಕೆಲಸ ಹೆಚ್ಚು ಸಮಯ ತೆಗೆದುಕೊಳ್ಳುವ ಮತ್ತು ಹೆಚ್ಚು ಖರ್ಚಿನ ಕೆಲಸವಾದ್ದರಿಂದ, ಈ ಉಪ ಕರಣ ರೈತನಿಗೆ ಬಹಳ ಉಪಯೋಗಕರವಾಗುವುದರಲ್ಲಿ ಸಂದೇಹವಿಲ್ಲ.

**ಸಸ್ಯ ಸಂರಕ್ಷಣೆ :**

ಸ್ಪ್ರೇಯರ್ ಮತ್ತು ರಸ್ಟರ್‌ಗಳನ್ನು ಸಸ್ಯ ಸಂರಕ್ಷಣೆ ಮತ್ತು ಕಳೆ ನಿಯಂತ್ರಣಕ್ಕೆ ಉಪಯೋಗಿಸಲಾಗುತ್ತಿದೆ. ಕ್ಯಾಪ್‌ಸಾಕ್ ಸ್ಪ್ರೇಯರ್‌ನಿಂದ ಎಲ್ಲ ಮಟ್ಟದ ಬೆಳೆಗಳಲ್ಲಿಯೂ ಸಸ್ಯ ಸಂರಕ್ಷಣೆ ಕೆಲಸ ಮಾಡಬಹುದು. ಆದೇ ಗೆಟಾರ್ ವಾಕಿಂಗ್ ಸ್ಪ್ರೇಯರ್ ಮತ್ತು ಕೆಲವು ಸ್ಪ್ರೇಯರ್‌ಗಳು ಬೆಳೆ ಎತ್ತರವಾದಮೇಲೆ ಉಪಯೋಗಿಸಲು ಸಾಧ್ಯವಿಲ್ಲ. ಹಿತ್ತಾಳೆಯಿಂದ ಮಾಡಿದ ಸ್ಪ್ರೇಯರ್‌ಗಳಿಂದ ಪಿ.ವಿ ಸಿ ಸಿಂದ ಮಾಡಿದ ಸ್ಪ್ರೇಯರ್‌ಗಳು ಉತ್ತಮ. ಯಾಕೆಂದರೆ ಅವುಗಳ ಬೆಲೆ ಕಡಿಮೆ. ಅವುಗಳು ಹಗುರ ಮತ್ತು ತುಕ್ಕು ಹಿಡಿಯುವುದಿಲ್ಲ. ಮತ್ತು ಹೆಚ್ಚಿನ ಸಂರಕ್ಷಣಾಕ್ರಮಗಳು ಅಗತ್ಯವಿಲ್ಲ. ಈಗ ಮಾರುಕಟ್ಟೆಯಲ್ಲಿ ದೊರಕುತ್ತಿರುವ ಡಸ್ಟರುಗಳು, ಪುಡಿ ಉದುರಿಸುವ ಕೆಲಸಕ್ಕೆ ಸರಿಯಾಗಿದೆ. ಹೆಚ್ಚಿನ ಪ್ರಮಾಣದಲ್ಲಿ ಅಂದರೆ ಹೆಚ್ಚು ಇಳವರಿಯಲ್ಲಿ ಸಸ್ಯ ಸಂರಕ್ಷಣೆ ಮಾಡುವುದಕ್ಕೆ, ಯಂತ್ರಚಾಲಿತ ಸಿಂಪರಣ ಯಂತ್ರಗಳು ದೊರಕುತ್ತವೆ. ಕಳೆ ನಾಶಕಗಳನ್ನು ಸಿಂಪರಿಸಬೇಕಾದಲ್ಲಿ ಆದೇ ಕೆಲಸಕ್ಕೆ ಬೇರೆ ಸಿಂಪರಣಾ ಯಂತ್ರ ಉಪಯೋಗಿಸಬೇಕಾಗುತ್ತದೆ. ಇಲ್ಲದೆ ಹೋದಲ್ಲಿ ಬೆಳೆಗೆ ಹಾನಿಯಾಗುವ ಸಂದರ್ಭ ಜಾಸ್ತಿ.

**ಕೊಯ್ಲು ನಂತರ ಕಾರ್ಯಕ್ರಮ :**

ಒಕ್ಕಣೆಗೆ ಸಣ್ಣ ಸಣ್ಣ ಯಂತ್ರಗಳಿವೆ. ಅವುಗಳಿಂದ ಭತ್ತ, ಗೋಧಿ ರಾಗಿಯನ್ನು ಸುಲಭವಾಗಿ ಹೆಚ್ಚಿನ ಖರ್ಚಿಲ್ಲದೆ ಕಡಿಮೆ ಸಮಯದಲ್ಲಿ ಸರಿಯಾಗಿ ಒಕ್ಕಣೆ ಮಾಡಲು ಸಾಧ್ಯವಿದೆ. ಇವುಗಳಿಗೆ ಸಣ್ಣ ಸಣ್ಣ ಎಂಜಿನ್ ಅಥವಾ ಟ್ರಾಕ್ಟರ್ ಅಥವಾ ಪವರ್ ಟಿಲ್ಲರ್ ಅಥವಾ ವಿದ್ಯುಚ್ಛಕ್ತಿ ಮೋಟಾರುಸೇರಿಸಿದರೆ ಸಾಕಾಗುತ್ತದೆ. ಧಾನ್ಯದ ಒಕ್ಕಣೆ ಮತ್ತು ಒಕ್ಕಣೆ ಪ್ರಮಾಣ ಧಾನ್ಯದಲ್ಲಿರುವ ತೇವಾಂಶ ಯಂತ್ರದ ವೇಗ ಮತ್ತು ಯಂತ್ರದಲ್ಲಿರುವ ಕ್ಲಿಯರೆನ್ಸ್ ಮೇಲೆ ಅವಲಂಬಿಸಿದೆ. ಮುಸುಕಿನ ಜೋಳ ತೆನೆಯಿಂದ ತೆಗೆಯಲು ಸುಲಭವಾದ ಸಾಧನ ಶೆಲ್ಲರುಗಳು

ಇಷ್ಟೆಲ್ಲ ಸುಲಭ ಸಾಧನಗಳು ಮಾರುಕಟ್ಟೆಯಲ್ಲಿ ದೊರಕುತ್ತವೆ ಇವುಗಳ ಉಪಯೋಗವನ್ನು ಪಡೆದು ರೈತರು ದೇಶದ ಆಹಾರ ಅಭಾವವನ್ನು ನೀಗಿಸಬೇಕಾಗಿದೆ.

---





ಸಿದ್ಧ ಗಂ.ಗಾ

# ಕನ್ನಡ ಕಥೆ ಕಾದಂಬರಿ ಆಧರಿತ ಚಲನಚಿತ್ರಗಳು

ಎನ್. ಪಂಕಜ.

ಕನ್ನಡ ಚಲಚ್ಚಿತ್ರ ವಲಯದಲ್ಲಿ ಕಥೆ ಕಾದಂಬರಿಗಳನ್ನು ಆಧರಿಸಿ ಬರುತ್ತಿರುವ ಚಿತ್ರಗಳಿಗೆ ಈಗ ಲೆಖ್ಖವಿಲ್ಲ. ಅವುಗಳಲ್ಲಿ ಚಲನಚಿತ್ರ ಮಾಧ್ಯಮ ದೃಷ್ಟಿಯಿಂದ ಕೆಲವು ಬದಲಾವಣೆಗಳು ಅನಿವಾರ್ಯ-ಆವಶ್ಯಕ-ಸಹಜ. ಆದರೆ ಆಮೂಲಾಗ್ರ ಬದಲಾವಣೆಗಳು ಆದಾಗ ಮಾತ್ರ ಎಂತಹ ಲೇಖಕ-ಲೇಖಕಿಗೂ ಆಗುವ ನೋವು ಅಷ್ಟಿಷ್ಟಲ್ಲ. ಇಂತಹ ವ್ಯಥೆಯನ್ನು ಸ್ವತಃ ಅನುಭವಿಸಿರುವ ಪ್ರಸಿದ್ಧ ಲೇಖಕಿಯರಾದ ಶ್ರೀಮತಿ ಎನ್. ಪಂಕಜರವರು ತಮ್ಮ ಅನುಭವವನ್ನು ಇಲ್ಲಿ ಪಡಿಮೂಡಿಸಿದ್ದಾರೆ. -ಸಂ

ಕಥೆ ಕಾದಂಬರಿಗಳನ್ನು ಆಧರಿಸಿ ತೆಗೆದ ಚಿತ್ರಗಳನ್ನು ನೋಡಲು, ಸಾಧರಣವಾಗಿ ಎಲ್ಲರಿಗೂ ತವಕ. ಕಾರಣ ತಿಳಿದೇ ಇದೆ. ನಾವೆಲ್ಲರೂ ಆ ಕಥೆ ಕಾದಂಬರಿಗಳನ್ನು ಓದಿ, ಒಂದಲ್ಲ ಒಂದು ರೀತಿಯಲ್ಲಿ ಮೆಚ್ಚುಗೆ ಸೂಚಿಸಿರುತ್ತೇವೆ. ಆ ಪಾತ್ರಗಳು ಜೀವ ಕಳೆದು ತೆರೆಯ ಮೇಲೆ ಓಡಿಯಾಡಿದರೆ —ಆ ಕಥೆ ರೂಪತಾಳಿ ನಮ್ಮ ಮುಂದೆನಿಂತರೆ, ಹೇಗಿರುದೋ ಎಂಬ ಕುತೂಹಲ ಸೊಗಸಾಗಿರಬಹುದು, ಎಂಬ ಅನಿಸಿಕೆ, ಆದರೆ, ಆ ಅನಿಸಿಕೆ ಭ್ರಮೆಯಾಗಿ ಪರಿಣಮಿಸಿ, ಕುತೂಹಲ ಜಿಗುಪ್ಸೆಗೆ ಇಳಿದಾಗ ಅನುಭವಿಸುವ ಆ ತಳಮಳ ಅಷ್ಟಿಷ್ಟಲ್ಲ! ನಮಗೇ ಹೀಗಾಗಬೇಕಾದರೆ, ಇನ್ನೂ ಆ ಮೂಲ ಕಥೆಯ ಲೇಖಕನಿಗೆ ಹೇಗಾಗಿರಬೇಡ ?

ಕಾಂಬರಿಯ ಮಾಧ್ಯಮವೇ ಬೇರೆ, ಚಿತ್ರಕಥೆಯ ಮಾಧ್ಯಮವೇ ಬೇರೆ, ಹೀಗಾಗಿ ಬದಲಾವಣೆಗಳು ಆಗುವುದೂ ಸಹಜ—ಅವು ಅನಿವಾರ್ಯವಾಗುವುದೂ ಕೆಲವು ವೇಳೆ ಆವಶ್ಯಕ. ಆದರೆ, ಆಮೂಲಾಗ್ರ ಬದಲಾವಣೆಗಳು ಆದಾಗ ಮಾತ್ರ ಎಂತಹ ಲೇಖಕನಿಗೂ ಬೇಸರ. ಆ ಬದವಲಾಣೆಗಳ ಕಥೆಗೆ ಇನ್ನಷ್ಟು ಮೆರಗು ಕೊಟ್ಟಾಗ ಮಾತು ಬೇರೆಯಾಗಬಹುದು.

ಕಥೆ—ಕಾದಂಬರಿಗಳನ್ನು ಆಧರಿಸಿ ಬರುತ್ತಿರುವ ಚಿತ್ರಗಳಿಗೆ ಈಗ ಲೆಖ್ಖವಿಲ್ಲ. ಲೇಖಕ ಲೆಕ್ಚರರುಗಳೆಲ್ಲಾ ಈ ರಂಗಕ್ಕೆ ಇಳಿದಂತಿದೆ. ತೆರೆಯ ಮೇಲೆ ಎಲ್ಲರನ್ನೂ ಕಾಣಬಹುದು ಜೊತೆಗೆ ಅವರ ಕ್ಯಾಮ್‌ಪಸ್, ಅಲ್ಲಿಯ ವಿದ್ಯಾರ್ಥಿಗಳು —ಇತ್ಯಾದಿ ತಪ್ಪೇನಿಲ್ಲ. ಇದರಿಂದಾಗಿ ಒಂದು ಬಗೆಯ ಬೌದ್ಧಿಕ ಗಾಳಿ ನಮ್ಮ ಚಿತ್ರಗಳ ಮೇಲೆ ಬೀಸುತ್ತಿದೆ. ಪ್ರೇಕ್ಷಕರಲ್ಲೂ ವೈಚಾರಿಕತೆ ಎಬ್ಬಿಸಿದೆ—ಎಬ್ಬಿಸುತ್ತಿದೆ.

ಮೊದಲಿಗೆ ಈ ನಿಟ್ಟಿನಲ್ಲಿ ಬಂದ 'ಸಂಸಾರ', ಕೆಲವರ್ಗದವರಲ್ಲಿ ಗಲಿಬಿಲಿಯನ್ನೇ ಉಂಟು ಮಾಡಿತೆಂದು ಹೇಳಬೇಕು. "ಒಂದು ಹಾಡಿಲ್ವಂತೆ, ಒಂದು ಡ್ಯಾನ್ಸ್ ಇಲ್ವಂತೆ ಆ ಸಿನಿಮಾದಲ್ಲಿ. ಆದಕ್ಯಾಕಪ್ಪ ಹೋಗೋವ್ರು!" —ಎಂದು ಕ್ರಮೇಣ ಆ ಜಾಡು ಬೌದ್ಧಿಕ ವರ್ಗದವರಿಗೆ ಹಿಡಿಸಿತು. ಹೆಚ್ಚು ಪರಿಣಾಮಕಾರಿ ಎನಿಸಿತು.

'ಸಂಸಾರ' ಚಿತ್ರವನ್ನ ಮೂಲ ಕಥೆಗೆ ಲೋಪ ಬಾರದಂತೆ ತೆಗೆದುದಾದರೂ, ಕಥೆ ಈಗಿನ ಕಾಲಕ್ಕೆ ಹೊಂದುವುದಿಲ್ಲ. ಅಂತೆಯೇ, ಚಿತ್ರ actmoded ಎಂಬ ಭಾವನೆಯನ್ನು ಬರಿಸಿದೆ. ಹಿಂದುಗಡೆಯೇ ಬಂದ 'ವಂಶವೃಕ್ಷ' ಹೆಚ್ಚು ಯಶಸ್ವಿಯಾಯಿತು; ಮೂಲ ಕಥೆಯನ್ನು ಹೃದಯಸ್ಪರ್ಶಿಯಾಗಿ ಎತ್ತಿ ತೋರಿಸುವಂತೆ ಮೂಡಿಬಂದಿರುವ ಚಿತ್ರ ಎಂದರೆ ತಪ್ಪಾಗಲಾರದು. ಚಿತ್ರ

( 22 ನೇ ಪುಟ ನೋಡಿ)

# ಚಿಲುಮೆ

— ಪ. ಪ. ಜಕ್ಕಣ್ಣ.



ಸೂರ್ಯನ ಬೆಳಕಿನಲಿ ಚಿಮ್ಮುತಿಹ ಚಿಲುಮೆ
ಕಾರ್ಗತ್ತಲೆ ಹೊಳೆಯಲಿ ಉಕ್ಕುತಿಹುದು ನಿನ್ನೊಲುಮೆ
ಹರಿಯುತಿಹೆ ಹಗಲುರಾತ್ರಿ ನೆನಪಿಲ್ಲದ ಯಮುನೆ. ||೧||

ಚಂದ್ರ ಬೆಳಕಿನಲಿ ಥಳ-ಥಳಿಸುವುದು ನಿನ್ನಯ ಮೈ
ಮಂಜಿಗಿಂತ ಹೆಚ್ಚು ಬಿಳುಪಾಗಿ ಹೊಳೆಯುವುದೈ
ನಿನ್ನಾ ಸುಂದರ ನೋಟನನ್ನಯ ತನುಮನ ತಣಿಯಿಸಿತೈ ||೨||

ಯಾವ ಚಿಂತಿಯಲಿ ನೀ ಬೆಂದು ಬಳಲಿರುವೆ ?
ಯಾವಾಗಲೂ ಮೇಲಿಕ್ಕೇರಿಳಿದು ಹರಿಯುತಲಿರುವೆ !
ಎಂದು ಕೇಳಿದರೆ "ನನಗೆ ಚಿಂತೆ ಆಯಾಸಗಳಿಲ್ಲೆನ್ನುವೆ" ||೩||

ಹೌದು ! ಚಿಂತೆಯು ಸೋಂಕು ನಿನಗಿಲ್ಲ
ಭ್ರಾಂತಿಯ ಬೇಗೆ ನಿನಗಿಲ್ಲೆ ಇಲ್ಲ
ಸಂತಸದ ಸಾಗರವೆ ನಿನ್ನಯ ಬಾಳೆಲ್ಲ. ||೪||

ನಿನ್ನದು ಶಾಂತಿ-ಸಂಯಮ ಬಿತ್ತರಿಸುವ ತೀರ
ಕಾಮ-ಕ್ರೋಧಗಳಿಲ್ಲದ ಸೌಂದರ್ಯ ಸಾಗರ
ಸುತ್ತಲೂ ಪಚ್ಚಹಸಿರು ಹಸಿರಿನ ನಗರ. ||೫||

ದ್ವೇಷಾಸೂಯೆಗಳಿಲ್ಲದ ನಿನ್ನುದರ
ಮೋಸವಂಚನೆಗಳಿಲ್ಲದಾಗರ
ಕಮಲ ಪುಷ್ಪಗಳ ಮೇಲೆ ಸುರಿಸುತಿಹೆ ಪನ್ನೀರ. ||೬||

ನನ್ನಯ ಬಯಕೆ ಎಂದಿಗೂ ನಿನ್ನಂತಾಗಲೂ ಬೇಕು
ಜೀವನದಲಿ ಹಗಲಿರುಳೂ ನವಚೈತನ್ಯತೆ ತುಂಬಿ ಬರಬೇಕು
ನಿನ್ನಂತೆಯೆ ನನ್ನ ಮನ ಹರುಷದಿ ಚಿಮ್ಮು-ಚಿಮ್ಮುತಲಿರ ಬೇಕು. ||೭||

# ಅನುಭವ

—. ಹೆಗ್ಗವಾಡಿ ಗುರುಸಿದ್ಧಪ್ಪ.

ಎಲ್ಲವನು ಬಲ್ಲಾತನೆಲ್ಲಿಯೂಯಿಲ್ಲ ।
ಕಲಿಯಲಿಕೆ ತಿಳಿಯಲಿಕೆ ಕೊನೆಯೆಂಬುದಿಲ್ಲ ॥
ಇರುವನಕ ಅರಿವನ್ನು ಪಡೆಯುವವನೆ ಜಾಣ ।
ಅರಿತವನು ತಾನೆಂದು ಮೆರೆಯುವವ ಕೋಣ ॥

ಜಗದಲ್ಲಿ ಕಿಂಕರನ ಕಿಂಕರನೆ ಆಗಿ ।
ರಾಗದ್ವೇಷಾದಿಗಳ ತ್ಯಜಿಸುತ್ತ ಸಾಗಿ ॥
ಜಗದೀಶನಲಿ ಭಕ್ತಿಯಿಂ ಸತತ ಶಿರಬಾಗಿ ।
ಜಗವ ಜಯಿಸಲು ಬಹುದು ಬಹು ಸುಲಭವಾಗಿ ॥

ವಿದ್ಯೆ ಕಲಿಯವುದು ಒಳ್ಳೆಯ ಬುದ್ಧಿಗಾಗಿ ।
ಬುದ್ಧಿ ಬಾರದ ವಿದ್ಯೆ ಅದು ಏತಕಾಗಿ ॥
ವಿದ್ಯೆಯನು ಕಲಿತಾಗ ವಿನಯವನು ಹೊಂದು ।
ಎಂದೆಂದಿಗೂಯಿಲ್ಲ ಇದರಿಂದ ಕುಂದು ॥

ಆತ್ಮ ಸ್ತುತಿ ಪರನಿಂದೆ ಇವೆರಡೂ ಒಂದೇ ।
ನರಕಕ್ಕೆ ಹೆದ್ದಾರಿ ಸೇರಲಿಕೆ ಮುಂದೆ ॥
ಪರನಿಂದೆ ಪ್ರಾರಾಬ್ಧ ಆತ್ಮ ಸ್ತುತಿಯು ಆಗಾಮಿ ।
ವಂಚನೆಯೆ ಸಂಚಿತವು ಮರೆಯದವನೇಮಿ ॥

ಕಥೆಯಲ್ಲಿ ವ್ಯತ್ಯಾಸವಿಲ್ಲ; ಸಂಭಾಷಣೆಗಳು ಬೇರೆಯಾಗಿಲ್ಲ. ನಟನೆ ನೈಜವಾಗಿದೆ, ಇದು ಆಶ್ಚರ್ಯವನ್ನೇ ಉಂಟುಮಾಡಿತು. ಚಿತ್ರ ನಿಧಾನವಾಗಿ ಸಾಗಿದರೂ, ಹಿನ್ನೆಲೆಯ ಆ ಭಾವಪೂರ್ಣ ಸಂಗೀತ! ಸತ್ಯಜಿತ್ ರೇರವರು ಇಂತಹ ಪ್ರಯೋಗಗಳನ್ನು ಬಂಗಾಳಿ ಚಿತ್ರಗಳಲ್ಲಿ ಯಶಸ್ವಿಯಾಗಿ ತಂದಿದ್ದರೂ, ನಮಗೆ ಇದು ಹೊಸದು-ಇದನ್ನು ನೋಡಿದಮೇಲೆ, ಇನ್ನುಮೇಲೆ ಅಂತಹುದೇ ಚಿತ್ರಗಳು ಬೇಕು ಎಂಬ ಅಲೆ ಎದ್ದಿತು-ಹಬ್ಬಿತು.............

ನೋಡ ನೋಡುವಲ್ಲಿ ಒಂದರ ಹಿಂದೊಂದು ಬರಲಾರಂಭಿಸಿತು–ತಬ್ಬಲಿ ನೀನಾದೆ ಮಗನೇ. ಕಾಡು, ಹಂಸಗೀತೆ, ಚೋಮನದುಡಿ, ಸಲ್ಲವಿ, ಅನುರೂಪ, ಚಂಡಮಾರುತ, ಘಟಶ್ರಾದ್ಧ, ಇತ್ಯಾದಿ.

ಮೂಲ ಕಥೆಗಳಿಗಿಂತ ಭಿನ್ನವಾಗದೆಯೇ, ಅವುಗಳನ್ನು ಮೀರಿಸುವ ಅಪರೂಪ ಚಿತ್ರಗಳುಂಟು. ಕಾಡು ಅದರಲ್ಲಿ ಒಂದು. ಕಾದಂಬರಿಯನ್ನು ಹಿಂದೆ ಓದಿದ್ದೆ; ಆದರೆ ಚಿತ್ರವನ್ನು ನೋಡಿದಮೇಲೆ, ಮತ್ತೊಮ್ಮೆ ಕಾದಂಬರಿಯನ್ನು ಓದಿದಾಗ ಆದ ಅನುಭವವೇ ಬೇರೆ. ಅದರಲ್ಲಿ ಇರುವುದೇ ಕಥೆ. ಹಳ್ಳಿಯ ವಾತಾವರಣ, ಭಾಷೆ; ಎಲ್ಲ ಸ್ವಾಭಾವಿಕ, ಕಾದಂಬರಿಯಲ್ಲಿ ಬಳಸಿರುವ ತಂತ್ರ, ಒಬ್ಬ ಚಿಕ್ಕ ಹುಡುಗನ ಮೂಲಕ ನಮಗೆ ಕಥೆಯನ್ನು ತಿಳಿಸುವುದು–ಇದನ್ನು ಹುಡುಗನ ಕಣ್ಣಿನ ಮೂಲಕ ನಿರ್ದೇಶಕರು ಅದೆಷ್ಟು ಯಶಸ್ವಿಯಾಗಿ ಮೂಡಿಸಿದ್ದಾರೆ! ಮತ್ತು, ಹಿನ್ನೆಲೆಯಲ್ಲಿ ಸಂದರ್ಭಕ್ಕನುಸಾರವಾಗಿ ಕೇಳಿ ಬರುವ ಆ ಸಂಗೀತ–ಅದರಲ್ಲೂ ಆ ಯಾಂತ್ರಿಕನ ಬಳಿ ಹೋಗುವ ದೃಶ್ಯದಲ್ಲಿ! ಚಿತ್ರದ ಭಾಷೆ ಎಂದರೆ ಇದು!

'ತಬ್ಬಲಿ ನೀನಾದೆ ಮಗನೆ'––ಮೂಲ ಕಥೆಗೆ ಲೋಪ ಬಾರದಂತೆ ತೆಗೆದಿದ್ದರೂ, ನಟನೆ-ಸಂಗೀತ–ಸಂಭಾಷಣೆ, ಇವೆಲ್ಲವೂ ಸುಮಾರು ವಂಶವೃಕ್ಷಕ್ಕೆ ಸರಿಸಮಾನವಾಗಿಯೇ ಇದ್ದರೂ, ಕಥೆಯ ದೃಷ್ಟಿಯಿಂದ, ಇದನ್ನು ಬಹಳ ಹಿಂದೆಯೇ ಚಿತ್ರ ಮಾಡಿರಬೇಕಿತ್ತು, ಎಂದೆನ್ನಿಸುತ್ತದೆ. ಮತ್ತೆ ಮುಗಿಯುವ ವೇಳೆಗೆ, ತಲೆಯ ತುಂಬಾ ಬರೀ ಹಸುಗಳು! ಥಿಯೇಟರ್ ಬಿಟ್ಟು, ಹೊರಗೆ ಬಂದ ತಕ್ಷಣ ಮೊದಲು ಕಣ್ಣಿಗೆ ಕಾಣುವುದು ಹಸು!

ಮೊನ್ನೆ ತಾನೆ ಬಂದಿರುವ 'ಘಟಶ್ರಾದ್ಧ'ವಂತೂ ಖಂಡಿತ ಈಗಿನ ಕಾಲಕ್ಕೆ ಸರಿಹೊಂದದ ಕಥೆ. ಸಣ್ಣ ಕಥೆಗಳನ್ನು ಮಾಡುವಾಗ, ಹಿಗ್ಗಿಸಿ ಹಿಗ್ಗಿಸಿ ಮಾಡುವುದರಿಂದ, ನೀರಸವುಂಟಾಗುವ ಸಂಭವವಿದೆಯೇನೋ! ಮೂಲ ಕಥೆಯ ಸ್ವಾರಸ್ಯ–ಒತ್ತಡ, ಚಿತ್ರದಲ್ಲಿ ಬಂದಿಲ್ಲ; ಕಥೆ ಓದದವರು ಚಿತ್ರ ನೋಡಿದಲ್ಲಿ, ಮೂಲ ಕಥೆಯನ್ನು ಓದಬಾರಲು, ಎಂಬ ಭಾವನೆ ಅದು ಬರಿಸಿದಲ್ಲಿ ಆಶ್ಚರ್ಯವಿಲ್ಲ, ಮತ್ತು, ಕೊನೆಯ ದೃಶ್ಯ–ಕಥಾನಾಯಕಿಯ ಕೇಶರಾಶಿಯನ್ನು ತೆಗೆಯುವುದು–ಅನಾವಶ್ಯಕವಲ್ಲವೆ? ತಂದೆ ಮಗಳಿಗೆ ಶ್ರಾದ್ಧ ಮಾಡುತ್ತಿರುವ ದೃಶ್ಯದೊಂದಿಗೇ ಮುಗಿಸಿದ್ದಲ್ಲಿ, ಹೆಚ್ಚು ಪರಿಣಾಮಕಾರಿಯಾಗುತ್ತಿತ್ತಲ್ಲವೆ?

'ಕಥಾಸಂಗಮ' ಅಪೂರ್ವ ಪ್ರಯೋಗ, ಸಣ್ಣ ಕಥೆಗಳನ್ನು ಎಳೆದು ಎಳೆದು, ಪ್ರೇಕ್ಷಕರಿಗೆ ತಲೆನೋವನ್ನು ಉಂಟು ಮಾಡದೆ, ಕಥೆಗಳಾಗಿಯೇ ಚಿತ್ರವನ್ನು–ಅದೂ ಒಟ್ಟಿಗೆ ಮೂರು ಚಲನಚಿತ್ರಗಳನ್ನು ಪೈಗೂಡಿಸಿರುವ ಹೊಸ ಪ್ರಯೋಗ. ಆ ಮೂರು ಕಥೆಗಳೂ ಭಿನ್ನವಾಗಿರುವುದೇ ಆ ಪ್ರಯೋಗದ ವೈಶಿಷ್ಟ್ಯ. ಮೂಲ ಕಥೆಗಳು ಸೊಗಸಾಗಿದ್ದರೂ, ನೂರಾರು ಸೊಗಸಾದ ಕಥೆಗಳಲ್ಲಿ ಅವೂ ಒಂದಾಗಿತಷ್ಟೆ; ಚಿತ್ರಕಥೆಯಿಂದ ಅವುಗಳ ಕ ಏರಿದೆ. ಮೂಲ ಕಥೆಗಳಲ್ಲಿ ಕಾಣದ ಕೆಲವು ಮೆರುಗನ್ನು ಚಿತ್ರದಲ್ಲಿ ಕೆಲವು ಕಡೆ ತಂದಿರುವುದೇ ಮುಖ್ಯ ಕಾರಣ. ಉದಾಹರಣೆಗೆ, ಮುನಿತಾಯಿಗೆ ಮದುವೆ ಗೊತ್ತಾದಾಗ, ಊರಲ್ಲೆಲ್ಲಾ ಆ ಸುದ್ದಿ ಹಬ್ಬುವ ರೀತಿ–ಜನ ಒಂದೇ ಸಂಭ್ರಮದಿಂದ ತಾವಾಗಿ ಸಹಾಯಕ್ಕೆ ಬರುವುದು, 'ಹಂಗು' ವಿನಲ್ಲಿ ಆ ಪ್ರೊಫೆಸರ್‌ನ ಸಮಸ್ಯೆಗಳು 'ತಂಗಿ-ತಂದೆ' ಇತ್ಯಾದಿಗಳ ರೂಪದಲ್ಲಿ ಅವನನ್ನು ಕಾಡುವುದು–ಇತ್ಯಾದಿ.

'ಹಂಸ ಗೀತೆ'–ಮತ್ತೊಂದು ನೋಡಲೇಬೇಕಾದಂತಹ ಚಿತ್ರ. ಏನೇ ಆದರೂ ಆ ಕಾದಂಬರಿಯ ಭವ್ಯತೆ ಸಂಪೂರ್ಣವಾಗಿ ಇಳಿದಿಲ್ಲ. ನೈಜತೆಯಲ್ಲೂ ಅಲ್ಲಲ್ಲಿ ಲೋಪ. ಉದಾಹರಣೆಗೆ, ನಾಯಕ ವೃದ್ಧನಾಗುತ್ತಾನೆ; ಆದರೆ ಪಾಳೆಯಗಾರನಿಗೆ ಮಾತ್ರ

ಕೊನೆಯವರೆಗೂ ವಯಸ್ಸೇ ಆಗುವುದಿಲ್ಲ! ಪಾಳೆಯಗಾರನ ಅರಮನೆಯನ್ನು ಚಂದ್ರಾಸಾನಿಯ ವೈಭವವನ್ನು ತೋರಿಸಬಹುದಿತ್ತು: ಆಕೆ ವೆಂಕಟಸುಬ್ಬಯ್ಯನವರ ಗುಣ–ವ್ಯಕ್ತಿತ್ವಕ್ಕೆ ಮಾರು ಹೋಗಿ, ತನ್ನ ಜೀವನಕ್ರಮವನ್ನೇ ಬದಲಿಸುವುದು ಪ್ರೇಕ್ಷಕರ ಮನ ಮುಟ್ಟುತ್ತಿತ್ತು. 'ಹಂಸ ಗೀತೆ' ಕಾದಂಬರಿಯಲ್ಲಿ ಒಂದು ಪ್ರಸಂಗ ಮರೆಯಲಾಗದು. ಪ್ರಥಮ ರಾತ್ರಿ, ಹಾಸಿಗೆಯಮೇಲಿದ್ದ ಜಾಜಿಯ ಹೂಗಳನ್ನು ಕಂಡು ವೆಂಕಟಸುಬ್ಬಯ್ಯನಿಗೆ ವ್ಯಥೆ—'ಅವನ್ನು ಹಿಸುಕುವುದೇ? ಎಂತಹ ಕ್ರೌರ್ಯ!' ಒಂದೊಂದಾಗಿ, ಹುಶಾರಾಗಿ ಆರಿಸಿ, ಅವನ್ನೆಲ್ಲಾ ಎತ್ತಲಾರಂಬಿಸುವನು. "ಮಲಗುವುದನ್ನು ಬಿಟ್ಟು ಇದೇನು ನೋಡುತ್ತಿದ್ದೀರಿ ?"—ಎಂದು ಚಕಿತಗೊಂಡು ಕೇಳಿದ ಚಂದ್ರಾಸಾನಿಗೆಆತನ ಉತ್ತರ—"ಸೌಂದರ್ಯದ ಮುಡಿಯೇರಿಯೋ, ಭಗವಂತನ ಪಾದ ಸೇರಿಯೋ ಪುನೀತವಾಗಬೇಕಾಗಿದ್ದ ಹೂವು, ಭೋಗದ ಕಾವಿಗೆ ಸಿಕ್ಕಿ ಮಡಿಯ ಬೇಕೆ ? ಎಂತಹ ದುರಂತ !" ಎಂದು ಒದ್ದಾಡುವನು

"ಇನ್ನು ಮೇಲೆ ಹೀಗೆ ಮಾಡುವುದಿಲ್ಲ; ಬಿಡಿ ನಾನೇ ತೆಗೆಯುತ್ತೇನೆ" –ಎಂದು ಚಂದ್ರಾಸಾನಿ ಆ ಹೂಗಳನ್ನೆಲ್ಲಾ ತಾನೇ ಆರಿಸಿ ಆರಿಸಿ ತೆಗೆಯುತ್ತಾಳೆ. ಈ ದೃಶ್ಯ ಚಿತ್ರದಲ್ಲಿ ಬಂದಿರಬೇಕಿತ್ತು.

ಮತ್ತೆ ಹತ್ತಿರ ಬಂದ ಅಪೂರ್ವ ಸುಂದರಿ ಚಂದ್ರಸಾನಿಯನ್ನು ನೋಡಿ ಕಣ್ಣೀರು ಮಿಡಿದು, "ಹೂವು ನಲುಗಿತ್ತಲ್ಲಾ ಎಂದು ವ್ಯಥೆ ಪಟ್ಟೆ; ನೀನು ಒಂದು ಹೂವೇ ! ನಿನ್ನನ್ನ ಬಯಸಿದ ನಾನೊಬ್ಬ ಪಶು ! ಹಾಯಾಗಿ ಮಲಗು ಚಂದ್ರಾ –ನಾನು ಬರುತ್ತೇನೆ" –ಎಂದು ಬಾಗಿಲ ಕಡೆಗೆ ವೆಂಕಟಸುಬ್ಬಯ್ಯ ತಿರುಗಿದಾಗ, 'ಎಲ್ಲರಂತೆ ಕಾಮತೃಪ್ತಿ ಬಯಸಿ ಬಂದವರಲ್ಲ ಇವರು ! ಎಂಬ ಅರಿವು ತಕ್ಷಣ ಚಂದ್ರಾಸಾನಿಗಾಗಿ, ಆ ಕ್ಷಣದಲ್ಲಿ ಅವಳ ಹೃದಯದಲ್ಲಿ ಮಹತ್ತರ ಬದಲಾವಣೆ ಆಗುವ ಪ್ರಸಂಗ –ಇವನ್ನೂ ಚಿತ್ರದಲ್ಲಿ ತೋರಿಸಬಹುದಿತ್ತು.

'ಹಂಸಗೀತೆ' ಚಿತ್ರದ ಅಂತ್ಯ ಹೃದಯಸ್ಪರ್ಶಿಯಾಗಿದ್ದರೂ, ಕಾದಂಬರಿಯಲ್ಲೇ ಸೊಗಸು, ಇಂದು ಬಿಟ್ಟರೆ, ಮತ್ತೆ ಅವರ ಹಾಡನ್ನು ಕೇಳುವ ಯೋಗ ಉಂಟೋ ಇಲ್ಲವೋ, ಎಂದುಕೊಂಡು ಟಿಪ್ಪು ವೆಂಕಟಸುಬ್ಬಯ್ಯನವರಲ್ಲಿಗೆ ಆ ರಾತ್ರಿ ಬರುವನು. ಅವರ ದಿವ್ಯ ಗಾನವನ್ನು ಕೇಳುತ್ತ ಕೇಳುತ್ತ, ಅವನ ಕ್ರೌರ್ಯ, ಹಠ, ಎಲ್ಲವೂ ಮಾಯವಾಗಿ ಅವನೊಳಗಿರುವ ಮನುಷ್ಯತ್ವ ಹೊರಹೊಮ್ಮುವುದು. ಹಾಡು ಮುಗಿದ ಮೇಲೆ ಒಳ ಹೋಗಿ, ಅವರ ಕ್ಷಮಾಪಣೆಯನ್ನು ಕೇಳಬೇಕು ಎಂದು ನಿರ್ಧರಿಸುವನು: ಅಷ್ಟರಲ್ಲಿ, ಅವರು ತಮ್ಮ ನಾಲಗೆಯನ್ನು ಕತ್ತರಿಸಿಕೊಳ್ಳುವರು ಸಂಕಟ–ಪಶ್ಚಾತ್ತಾಪದಿಂದ ಟಿಪ್ಪು ಅವರ ಕಾಲಮೇಲೆ ಬಿದ್ದು ಕಣ್ಣೀರಿಟ್ಟು ಹೇಳುವುದು –"ಹಗಲಾಗುವವರೆಗೂ ಕಾಯಲಿಲ್ಲವೇಕೆ ದಾದಾ? ಈ ಪಾಪಿಯ ಮನಸ್ಸು ಬದಲಾಗಲು ಅವಕಾಶ ಕೂಡ ಬಾರದಾಗಿತ್ತಾ ದಾದಾ ?"

"ನಿನ್ನದಲ್ಲ. ನನ್ನದೆ ನನಗೆ ಹೆದರಿಕೆಯಾಯಿತು. ನಾನೇ ಜೀವಭಯದಿಂದ ಸೋತು ನನ್ನ ದುರ್ಬಲ ಚಿತ್ತದಿಂದ ತಾಯಿಗೆ ಅಪಮಾನವಾದರೆ ? ಅದಕ್ಕೇ, ನನ್ನ ಮನಸ್ಸು ಕದಲಲು ಅವಕಾಶ ಕೊಡಲಿಲ್ಲ. ಪ್ರೀತಿಯಿಂದ ಟಿಪ್ಪುವಿನ ತಲೆಯನ್ನು ನೇವರಿಸಿದ ವೆಂಕಟಸುಬ್ಬಯ್ಯ ಹಲಗೆ–ಬಳಪವನ್ನು ತರಿಸಿಕೊಂಡು ಬರೆಯುವುದು.

ಇವೂ ಚಲನಚಿತ್ರದಲ್ಲಿ, ಬರಬೇಕಾಗಿತ್ತಲ್ಲವೆ ? 'ಶುಭಮಂಗಳ' ಚಿತ್ರದಲ್ಲಿ ಬದಲಾವಣೆಗಳು ಬೇಕಾದಷ್ಟೇ ನಡೆದಿದ್ದರೂ, ಕಥೆಗೆ ಲೋಪವಿಲ್ಲ. ಕಾದಂಬರಿ ಒಂದು ರೀತಿಯಲ್ಲಿ ಸೊಗಸಾಗಿದ್ದಲ್ಲಿ, ಚಿತ್ರ ತನ್ನದೇ ಆದ ರೀತಿಯಲ್ಲಿ ಮನರಂಜನೀಯ, ಮುಖ್ಯವಾಗಿ ಅದು 'Women's Life' ಅನ್ನು ತೋರಿಸುವ ಪ್ರಯತ್ನ. ಇನ್ನು 'ಎರಡು ಕನಸು' ಕಾದಂಬರಿಗೆ ಸಾರ್ಥಕತೆಯನ್ನು ತಂದಿದೆ. ಅಂತ್ಯದಲ್ಲಿ ಸೂಕ್ಷ್ಮ ಬದಲಾವಣೆಯನ್ನು ಮಾಡಿರುವುದು, ಪ್ರೇಕ್ಷಕ–ಹಾಗೂ ಓದುಗರಿಗೆ ಮೆಚ್ಚುಗೆಯೇ ! 'ಉಪಾಸನೆ' ಚಿತ್ರ ತುಂಬು ಸಂಭ್ರಮದಿಂದ ಆರಂಭವಾಯಿತು; ಇದ್ದಕ್ಕಿದ್ದಂತೆ ಎಲ್ಲೋ ತಿರುಗಿ ನಾಟಕೀಯವಾಯಿತು; ಕಾದಂಬರಿಯ ಸ್ವಾಭಾವಿಕತೆಯನ್ನು ಕಳೆದುಕೊಂಡಿತು.

'ಬೆಳ್ಳಿಯಮೋಡ, ಗೆಜ್ಜೆ ಪೂಜೆ, ಶರಪಂಜರ,' ಇವು— ಕಾದಂಬರಿಗಳಷ್ಟೇ ಪ್ರಭಾವ ಶಾಲಿ ಚಿತ್ರಗಳು. ಅದರಲ್ಲೂ 'ಗೆಜ್ಜೆ ಪೂಜೆ' ಬಂದಾಗ, ಹೆಚ್ಚು ಒಳ್ಳೆಯ

ಕನ್ನಡ ಚಿತ್ರಗಳು ಬಹಳ ಬಂದಿಲ್ಲವಾದ್ದರಿಂದ ಇದು ಜನಪ್ರಿಯವೇ ಆಯಿತು. ಶರಪಂಜರದಲ್ಲಿ ಕಲ್ಪನಾಳ ಅತಿ ಅಭಿನಯ ಚಿತ್ರಕ್ಕೆ ಸ್ವಲ್ಪ ಅಪಸ್ವರವನ್ನು ನೀಡಿದೆ, ಎಂದೆನ್ನಿಸುತ್ತದೆ.

ಹೇಮಾವತಿ ಚಿತ್ರ ಕಥೆಯಷ್ಟೇ ಪರಿಣಾಮಕಾರಿಯಾಗಿದ್ದರೂ, ಚಿತ್ರದ ಪೂರ್ತಿ ಎರಡು ಅತಿರೇಕಗಳು! ಮೊದಲಿಗೆ. ಹರಿಜನರ ನೆರಳನ್ನು ಕಂಡರೆ ಸರಿ, ಬಡಿದಾಡುವ ಜನವಾದರೆ ಕೊನೆಯಲ್ಲಿ ಅವರನ್ನು ಕಟ್ಟಿಕೊಳ್ಳುವ ಅದೇ ಜನ! ಪ್ರಸಂಗಗಳು ಸೂಕ್ತವಾಗಿದ್ದರೂ ಚಿತ್ರ ಮುಗಿಯುವುದೇ ಇಲ್ಲವೇನೋ, ಎನ್ನುವಷ್ಟು ಕಥೆ ಎಳೆಯಲ್ಪಟ್ಟಿದೆ— ಸ್ವಾರಸ್ಯ ಹರಿದಿದೆ.

'ಉಯ್ಯಾಲೆ', ಸರ್ವಮಂಗಳ, ಚಕ್ರತೀರ್ಥ' ಇವುಗಳು ಕಾದಂಬರಿಗೆ ಅನ್ಯಾಯವಾಗದಂತೆ ಕಾಣಿಸಿಕೊಂಡಿರುವ ಅಪರೂಪ ಚಿತ್ರಗಳಲ್ಲಿ ಕೆಲವು. ಕಾದಂಬರಿಕಾರರ ಹಿಡಿತ ಇದ್ದುದ್ದರಿಂದ ಸಾಧ್ಯವಾಯಿತೇನೋ ? ಮಯೂರ, ನಾಗರ ಹಾವು, ಎಡಕಲ್ಲು ಗುಡ್ಡದ ಮೇಲೆ' ಚಿತ್ರಗಳು ಕಾದಂಬರಿಗಳಷ್ಟು ಸೊಗಸಾಗಿಲ್ಲವಾಗಿದ್ದರೂ, ನುರಿತ ನಿರ್ಮಾಪಕರ ಕೈಯಲ್ಲಿ ತಮ್ಮ ಮಿಡಿತವನ್ನು ಉಳಿಸಿಕೊಂಡು, ಜೊತೆಗೆ ಕಮರ್ಶಿಯಲ್ ಫಿಲಮ್ಸ್ ಸಹ ಆಗಿ ನಿರ್ಮಾಪಕರಿಗೆ–ಪ್ರೇಕ್ಷಕರಿಗೆ ಸುಗ್ಗಿ ಹರಿಸಿದೆ. ಇದರಿಂದ ಕಾದಂಬರಿಗಾರನಿಗೂ ಸಮಾಧಾನ ಆಗಲೇಬೇಕಲ್ಲ ?

ಇವಿಷ್ಟರಲ್ಲಿ ಎತ್ತಿ ಕಾಣುವ ಚಿತ್ರಗಳು ಎಂದರೆ, –'ಭೂತಯ್ಯನ ಮಗ ಅಯ್ಯು' ಮತ್ತು 'ಜೋಮನ ದುಡಿ' ಕಥೆ ಬರೆದಿದ್ದಕ್ಕೆ ಸಾರ್ಥಕ, ಎನ್ನಿಸುವಂತಹ ಚಿತ್ರಗಳು, ನೀತಿಬೋಧಕ ಎನ್ನಿಸದಂತೆ, ಬೇಸರ ಬರಿಸದಂತೆ, ಅಸಂಭವತೆ ಇಲ್ಲದಂತೆ, ತೆಗೆದಿರುವ ಚಿತ್ರಗಳು ! ನೋಡಲೇಬೇಕಾದ ಚಿತ್ರಗಳು !

ಕೊನೆಯದಾಗಿ, ಇದೀಗ ಬಂದಿರುವ ಚಂಡಮಾರುತ, ಮತ್ತು ಅನುರೂಪ. ಮೊದಲನೆಯದು ನಾಟಕವನ್ನು ಆಧರಿಸಿ ತೆಗೆಯಲ್ಪಟ್ಟ ಚಿತ್ರವಾದಲ್ಲಿ, ಎರಡನೆಯದು ಚಿತ್ರಕ್ಕಾಗಿಯೇ ಬರೆಯಲ್ಪಟ್ಟ ಕಥೆ. ತುಂಬು ಪ್ರಭಾವಶಾಲಿಯಾದ ಚಿತ್ರಗಳಾದುದರಿಂದ, ಅವೆರಡರ ಬಗ್ಗೆ ಒಂದೆರಡು ಮಾತುಗಳನ್ನು ಬರೆಯದಿದ್ದಲ್ಲಿ ಈ ಲೇಖನವು ಸಂಪೂರ್ಣವಾಗದು.

ಈ ಎರಡು ಚಿತ್ರಗಳ ಕಥಾವಸ್ತು ಸುಮಾರು ಒಂದೇ ತರಹದ್ದು. ಶಿಕ್ಷಕನಾದವನ ಹೊಣೆ, ವಿದ್ಯಾರ್ಥಿಗಳ ಅಪಕ್ವ ಮನೋಭಾವ ಇವುಗಳಿಂದಾಗುವ ಆಭಾಸ. 'ಚಂಡಮಾರುತ'ವನ್ನು ವಿಮರ್ಶೆಗಳು ತೆಗಳಿದ್ದು ಆಶ್ಚರ್ಯ. ಪ್ರಸ್ತುತ ಸಮಸ್ಯೆಯನ್ನು ವಿಷಯವನ್ನು, ಮನದಟ್ಟಾಗುವಂತೆ ತೆರೆದು ತೋರಿಸುವ ಚಿತ್ರ, ಅದು ಶೂಲೆ ಅಂತ ಚಿತ್ರಗಳು ನಮ್ಮ ತರುಣ ಜನಾಂಗಗಳ ಮೇಲೆ ಅದೆಷ್ಟು ಕೆಟ್ಟ ಪರಿಣಾಮ ಬೀರಿವೆ. ಅಂತಹುದರಲ್ಲಿ, ಇಂತಹ ಚಿತ್ರಗಳನ್ನು ಸ್ವಾಗತಿಸಬೇಡವೇ ? ಚಂಡಮಾರುತದಲ್ಲಿ ಒಂದು ಅಶ್ಲೀಲ ಪ್ರಸಂಗವಿಲ್ಲ, ಮಾತಿಲ್ಲ. ಉಪಯೋಗಿಸಿರುವ ತಂತ್ರಗಳು – ಅಭಿನಂದನೀಯ. ಕಿಟಕಿಯ ಸರಳುಗಳ ಎರಡೂ ಬದಿಗಳಲ್ಲಿ ಬಂಧಿತರಾಗಿ ವಿಫಲತೆಯಲ್ಲಿ ತೊಳಲಾಡುವ ಆ ಎರಡು ಜೀವಗಳು, ಪೋಲೀಸರಿಂದ ಆ ಕ್ರಾಂತಿಕಾರನು ದೂರ ತಪ್ಪಿಸಿಕೊಂಡು ಓಡಿ ಓಡಿ ಹೋಗುವಾಗ, ಕೇಳಿ ಬರುವ ಬರಿದ ಅವರ ಪಾದಗಳ ಶಬ್ದ....ಕಾದಂಬರಿ ಗಾರನಾದವನು ಅಷ್ಟೊಂದು ಪ್ರಭಾವಶಾಲಿಯಾಗಿ, ಸಂಕ್ಷೇಪವಾಗಿ ತಂದಿರಲಾರ; ಇನ್ನೂ ಮೂಲನಾಟಕದಲ್ಲಿ ತರುವುದಂತೂ ದೂರದ ಮಾತೇ ಸರಿ.

ಪಲ್ಲವಿಯಿಂದ ಇನ್ನೂ ಎತ್ತರಕ್ಕೆ ಹೆಜ್ಜೆಯಿಟ್ಟದೆ ಅನುರೂಪ. ಎಲ್ಲ ಆಫ್‌ಬೀಟ್ ಚಿತ್ರಗಳಂತೆ ನಿಧಾನವಾಗಿ ಸಾಗಿದರೂ, ಬೇಸರ ತರಿಸುವಷ್ಟು ನಿಧಾನವಿಲ್ಲ. ಮೊಟಕಾದರೂ ಹರಿತವಾದ ಸಂಭಾಷಣೆ, ಅರ್ಥಗರ್ಭಿತ ಮೌನ, ಭಾವನೆಗಳನ್ನು ಕೆದಕುವ ಕೇವಲ ಎರಡುಮೂರು ಹಾಡುಗಳು ಕಮರ್ಶಿಯಲ್ ಟಚ್ ಈ ಚಿತ್ರಕ್ಕೆ ಬಂದಿರುವುದನ್ನು ನೋಡಿದರೆ, ಅದು ಅನಿವಾರ್ಯವೇನೋ ಎಂದನ್ನಿಸುತ್ತದೆ; ಅವಶ್ಯಕ ಎಂದು ತರ್ಕ ಒಪ್ಪಿಕೊಳ್ಳುತ್ತದೆ.

ಲಂಕೇಶ್‌ರವರ ಹಾಗೆ ನಾವುಗಳೂ ಯಾಕೆ ನಮ್ಮ ಕಥೆಗಳನ್ನು ನಾವೇ ಚಿತ್ರ ಮಾಡಬಾರದು ? ನುರಿತವರ ಮಾರ್ಗದರ್ಶನ ತೆಗೆದುಕೊಂಡು, ಕೆಲವರು ಲೇಖಕಿಯರು ಸೇರಿ, ನಾವೂ ಯಾಕೆ ಆ ನಿಟ್ಟಿನಲ್ಲಿ ಕೃಷಿ ಮಾಡಬಾರದು ? ಇದಕ್ಕೆ ಸಾಹಸ ಬೇಕು,–ಎಲ್ಲಕ್ಕಿಂತ

# ಐತರೇಯ

—ಆರ್. ಜಿ. ಹೆಗಡೆ

ಪಾಂಡಿತ್ಯ-ಪ್ರತಿಭೆಗಳ ಪ್ರಕಾಶನಕ್ಕೆ ಕುಲೀನತೆ ಮುಖ್ಯವಲ್ಲ; ಶ್ರದ್ಧೆ ಮುಖ್ಯ. ಇದನ್ನು ಬ್ರಾಹ್ಮಣೇತರ ಸ್ತ್ರೀಯ ಮಗನಾದ ಐತರೇಯ ಬಹು ಹಿಂದೆಯೇ ಶ್ರುತ ಪಡಿಸಿದ್ದಾನೆ. ಅದನ್ನು ಇಲ್ಲಿ ಲೇಖಕರು ಸಾದರ ಪಡಿಸಿದ್ದಾರೆ. —ಸಂ

ಪ್ರಾಚೀನ ಭಾರತದಲ್ಲಿ ಒಬ್ಬ ಋಷಿಯಿದ್ದ. ಆಗ ಬ್ರಾಹ್ಮಣನಿಗೆ ಅಂತರ್ಜಾತೀಯ ವಿವಾಹ ನಿಷಿದ್ಧವಿರಲಿಲ್ಲ. ಆತ ಕ್ಷತ್ರಿಯ, ವೈಶ್ಯ, ಶೂದ್ರ ಕನ್ಯೆಯನ್ನು ವಿವಾಹವಾಗಬಹುದಿತ್ತು. ಈ ತಪಸ್ವಿಗೆ ಎರಡು ಜನ ಪತ್ನಿಯರಿದ್ದರು. ಒಬ್ಬಳು ಬ್ರಾಹ್ಮಣ ಕನ್ಯೆ. ಮತ್ತೊಬ್ಬಳು ಶೂದ್ರಳು. ಇಬ್ಬರಿಗೂ ಒಬ್ಬೊಬ್ಬ ಸುಂದರ ಪುತ್ರರಾದರು.

ಕುಮಾರರಿಬ್ಬರೂ ಬಾಲ್ಯಾವಸ್ಥೆ ಕಳೆದು ಶಿಕ್ಷಣ ಪಡೆಯುವ ವಯಸ್ಸಿಗೆ ಬಂದರು. ಆ ಕಾಲದ ಶಿಕ್ಷಣ ವ್ಯವಸ್ಥೆ ತುಂಬಾ ಕಟ್ಟುನಿಟ್ಟಾಗಿತ್ತು. ಯಜ್ಞವೇದಿಕೆಯ ಬಳಿ ಪಾಠ ಹೇಳುತ್ತಿದ್ದರು.

ಋಷಿ ಪತ್ನಿಯರಿಬ್ಬರೂ ತಮ್ಮ ಮಕ್ಕಳನ್ನು ಶಿಕ್ಷಣಕ್ಕಾಗಿ ಯಜ್ಞ ಸ್ಥಳಕ್ಕೆ ಕಳಿಸಿದರು. ತಪಸ್ವಿ ಬ್ರಾಹ್ಮಣಿಯ ಮಗನನ್ನು ಮಾತ್ರ ಶಿಕ್ಷಣಕ್ಕೆ ಸ್ವೀಕರಿಸಿದ; ಶೂದ್ರಳ ಪುತ್ರನನ್ನು ಬೈದು ಹೊರಗೋಡಿಸಿಬಿಟ್ಟ.

ಆ ಬಾಲಕ ಅದಮ್ಯ ಉತ್ಸಾಹ, ಆಶೆಗಳನ್ನು ಹೊತ್ತು ವಿದ್ಯಾರ್ಥಿಯಾಗಿ ಬಂದಿದ್ದ. ತಂದೆಯೇ ತಿರಸ್ಕರಿಸಿದಾಗ ಆತನಿಗೆ ತುಂಬಾ ದುಃಖವಾಯಿತು. ಅಳುತ್ತ ತಾಯಿಯ ಬಳಿ ಬಂದ, ಕುಮಾರ, ಎಲ್ಲವನ್ನೂ ತಿಳಿಸಿದ.

"ಮಗೂ, ನಿನ್ನ ಅದೃಷ್ಟವೇ ಹಾಗಿದ್ದರೆ ನಾನೇನು ಮಾಡಲು ಸಾಧ್ಯ? ನಿನ್ನ ತಂದೆ ಇಷ್ಟೊಂದು ಜ್ಞಾನಿಗಳಾಗಿ ನಿನ್ನೊಂದಿಗೆ ಹೀಗೆವರ್ತಿಸಿದರೆ? ನೀನು ಶೂದ್ರಳ ಮಗನೆಂದು ಹೀಗಾಯಿತಲ್ಲವೆ? ಹೌದು_ನಾನು ಮಣ್ಣಿನ ಮಗಳು. ನಾನು ಭೂದೇವಿಯಲ್ಲಿಬೇಡಿಕೊಳ್ಳುತ್ತೇನೆ.ಆ ತಾಯಿ ನಿನ್ನಿಷ್ಟದಂತೆ ವಿದ್ಯೆ ಕಲಿಸುವಳೆಂಬ ನಂಬಿಕೆನನಗಿದೆ!" ಎಂದಳು ಶೂದ್ರ ಋಷಿಪತ್ನಿ.

ಅಂತೆಯೇ ಶ್ರದ್ಧಾಭಕ್ತಿಗಳಿಂದ ಭೂದೇವಿಯನು ಪ್ರಾರ್ಥಿಸಿದಳು ಆ ತಾಯಿ ತನ್ನ ಮಗಳ ಪ್ರಾರ್ಥನೆಗ ಭೂದೇವಿ ಒಲಿದು ಪ್ರತ್ಯಕ್ಷಳಾದಳು.

---

(24ನೇ ಪುಟದಿಂದ)

ಮಿಗಿಲಾಗಿ, ಮೂಲ ಬಂಡವಾಳ ಇರಬೇಕು. ಇದು ಎಷ್ಟು ಜನಕ್ಕೆ ಸಾಧ್ಯ?

ಕೊನೆಯದಾಗಿ, ಈಗೀಗ, ಸರಕಾರದಿಂದ ಸಿಗುವ ಸಬ್‌ಸಿಡಿಯ ಆಸೆಯಿಂದ, ಆ ಕ್ಷೇತ್ರದಲ್ಲಿಯಾಗಲಿ, ಸಾಹಿತ್ಯದಲ್ಲಿಯಾಗಲಿ, ಅನುಭವ-ಶ್ರದ್ಧೆ ಇಲ್ಲದವರು ಸಹ, ಚಲನಚಿತ್ರ ನಿರ್ಮಾಪಕರಾಗಿ, ಸೊಗಸಾದ ಕಥೆಗಳನ್ನು ಹಾಳು ಮಾಡುವ, ಕನ್ನಡ ಚಲನಚಿತ್ರಗಳ ಹೆಸರನ್ನು ಕೆಡಿಸುವ ಸಂಭವವಿದೆ. ಆದ್ದರಿಂದ, ನಾವು ನಮ್ಮ ಕಥೆಗಳನ್ನು ಕೊಡುವಾಗ, ವಿಚಾರಿಸಿ, ಚರ್ಚಿಸಿ, ಒಪ್ಪಿಕೊಳ್ಳುವುದು ಮೇಲು. ನನ್ನದೇ ಸಾಕು ಉದಾಹರಣೆ--ನನ್ನ ಕಾದಂಬರಿಯಾದ—

'ಬರಲಿ ಇನ್ನು.......ಯಮುನೆ!–ಯನ್ನು ನಿರ್ಮಾಪಕರು ತೆಗೆದುಕೊಳ್ಳುವಾಗ ಹೇಳಿದರು — "I will hash it; Mash it, and cash it" ಎಂದು. ಆ ಕ್ಷೇತ್ರದ ಬಗ್ಗೆ ಏನೇನೂ ಅರಿಯದ ನಾನು,–ಅವರ ಜೊತೆಯಲ್ಲಿ ಸಿಕ್ಕುಬಿಟ್ಟೆ. ಎರಡು ಮೂರು ಶೂಟಿಂಗ್‌ಗಳನ್ನು ಕಂಡು ದಿಗ್ಭ್ರಮೆಗೊಂಡೆ. 'ಬರಲಿ ಇನ್ನು .......ಯಮುನೆ?' — ಸಿಪಾಯಿರಾಮು ವಾಗಿ ತೆರೆಯಮೇಲೆ ಬಂದಾಗ.......ಅತ್ತುಬಿಟ್ಟೆ. —

(25 ನೇ ಪುಟದಿಂದ)

"ಮಗಳೇ, ಚಿಂತಿಸಬೇಡ. ಪ್ರಪಂಚದ ವಿದ್ಯಾ ಭಂಡಾರವೆಲ್ಲ ನನ್ನೊಳಗೇ ಅಡಕವಾಗಿದೆ. ನಿನ್ನ ಮಗ ನನ್ನ ಸರ್ವ ವಿದ್ಯಾ ಪಾರಂಗತನನ್ನಾಗಿ ಮಾಡುತ್ತೇನೆ!" ಎಂದು ಅಭಯ ನೀಡಿದಳು.

ನಿಶ್ಚಿಂತಳಾದ ಋಷಿಪತ್ನಿ ಬಾಲಕನನ್ನು ಭೂ ಮಾತೆಗೆ ಒಪ್ಪಿಸಿದಳು. ಪ್ರಾಪ್ತ ವಯಸ್ಕನಾಗುವ ವೇಳೆಗೆ ಸಕಲಶಾಸ್ತ್ರ ವಿಶಾರದನಾದ ಮಗ ಮಾತೆಯ ಬಳಿ ಮರ ಳಿದ. ಕೊನೆಗೆ ಋಗ್ವೇದದ ಸರ್ವಶ್ರೇಷ್ಠ ಅಂಗವೆನಿಸಿದ 'ಐತರೇಯ ಬ್ರಾಹ್ಮಣ' ವನ್ನು ರಚಿಸಿದ.

ಬ್ರಾಹ್ಮಣೇತರ ಮಗನಾದುದರಿಂದ ತನ್ನನ್ನು 'ಐತರೇಯ' ಎಂದು ಕರೆದುಕೊಂಡ. ಅದರಿಂದಲೇ ಆತನ ಕೃತಿ 'ಐತರೇಯಾರಣ್ಯಕ'–ಅಥವಾ 'ಐತರೇಯೋಪನಿಷತ್ತು' ಎಂದು ಪ್ರಸಿದ್ಧವಾದೆ. ಈ ಕೃತಿಯಿಂದ, ವಿದ್ವತ್ತು ಹಾಗೂ ಪ್ರತಿಭೆಗೆ ಕುಲೀನನಾಗಿರುವುದೇ ಮುಖ್ಯವಲ್ಲ; ಶ್ರದ್ಧೆಯೇ ಪ್ರಮುಖ್ಯವೆಂಬುದನ್ನು ಐತರೇಯ ಸಿದ್ಧ ಮಾಡಿ ತೋರಿಸಿದ.

ಇಂದಿಗೂ ಜಾತಿ–ಧರ್ಮಗಳನ್ನು ಮುಂದೊಡ್ಡಿ ಸಮಾಜದ ಬಿರುಕನ್ನು ಹೆಚ್ಚಿಸುತ್ತಿರುವ 'ಸನಾತನಿಗಳು' ಈ ಉದಾಹರಣೆಯಿಂದ ಪಾಠ ಕಲಿಯಬಹುದಾಗಿದೆ. —

(10 ನೇ ಪುಟದಿಂದ)

ಮನೇ ತುಂಬ ನೀಲರತ್ನ, ಪಚ್ಚೆರತ್ನ ಉದುರುತ್ತವೆ.

ಕಾಲಲೋಚನನೆಂದು ಐದನೆ ಭವದಿ ಸುವ್ವಲಾಲಿ
ನೀಲಕಂಠನ ಬಳಿ ಇದ್ದೆ ಸುವ್ವಲಾಲಿ ||
ಆ ಮೇಲೆ ವೃಷಭ ಗಣೇಶ್ವರನಾಗಿ ಸುವ್ವಲಾಲಿ |
ದೇವ ಶಿವನೊಡನೆ ಕೈಲಾಸದಲ್ಲಿದ್ದೆ ಸುವ್ವಲಾಲಿ ||

ಈ ವಿವರಣೆಯೊಂದಿಗೆ ವಜ್ರ ಕೆಂಪಿನ ಅಂಗಿ ಕಳಚಿ ವಜ್ರ ಕೆಂಪು ಸಿಡಿದು ಮನೆಯೆಲ್ಲಾ ಈಡಾಡುತ್ತದೆ. ಊರವರೆಲ್ಲ ಈ ಪವಾಡಕ್ಕೆ ಬೆರಗಾಗುತ್ತಾರೆ. ಇದು ಜಾನಪದ ಶೈಲಿಯ ಕಥನದ ಎರಡನೆ ಪವಾಡ. —

## ಮಹಾತ್ಮರ ನೆನಪುಗಳು-೫

ದರಿದ್ರರಲ್ಲಿ ಕರುಣೆ

ಒಮ್ಮೆ ಭುಲಾಬಾಯಿ ದೇಸಾಯಿ ಮತ್ತು ಗಾಂಧೀಜಿ ಕಾಲ್ನಡಿಗೆಯಲ್ಲಿ ಹೊರಟಿದ್ದರು. ಮಧ್ಯಾಹ್ನದ ಉರಿ ಬಿಸಿಲು. ಬಾಪೂ ಕಾಲಿಗೆ ಚಪ್ಪಲಿಯೂ ಹಾಕಿರಲಿಲ್ಲ; ಬೆನ್ನಿನಲ್ಲಿ ತುಂಡು ಬಟ್ಟೆಯೂ ಇರಲಿಲ್ಲ. ದೇಸಾಯಿಯು ಇದನ್ನು ಕಂಡು, "ಬಾಪೂ ನಿಮ್ಮ ಕಾಲುಗಳು ಸುಡುತ್ತಿವೆ. ನನ್ನ ಚಪ್ಪಲಿಗಳನ್ನಾದರೂ ಹಾಕಿಕೊಳ್ಳಿರಲ್ಲ" ಎಂದರು.

ಅದೇ ವೇಳೆಗೆ ಒಬ್ಬ ಬಡವ ತಲೆಯಲ್ಲಿ ಕಟ್ಟಿಗೆಯ ಹೊರೆ ಹೊತ್ತುಕೊಂಡು ಬಂದ. ಅವನ ಮೈ ಮೇಲೆ ಬಟ್ಟೆಯೂ ಇರಲಿಲ್ಲ; ಕಾಲಲ್ಲಿ ಚಪ್ಪಲಿಯೂ ಇರಲಿಲ್ಲ. ಮೈ ಮೇಲೆ ಧಾರಾಕಾರ ಬೆವರು ಸುರಿಯುತ್ತಿತ್ತು. ಗಾಂಧೀಜಿ ದೇಸಾಯಿಯವರ ಪ್ರಶ್ನೆಗೆ ಏನೂ ಉತ್ತರಿಸದೆ, ಆ ದರಿದ್ರನ ಕಡೆಗೆ ನೋಡಿದರು. ಕೂಡಲೇ ದೇಸಾಯಿಯವರು ತಮ್ಮ ಕಾಲಿನಿಂದ ಚಪ್ಪಲಿಗಳನ್ನು ಕಳಚಿ ಆ ಬಡವನ ಮುಂದಿರಿಸಿದರಂತೆ.

ಇನ್ನೊಮ್ಮೆ, ಬಾಪೂ ಒಂದು ಶಾಲೆಗೆ ಭೇಟಿ ಕೊಟ್ಟಾಗ ಒಬ್ಬ ಬಾಲಕ ಅವರೊಂದಿಗೆ, "ಬಾಪೂ, ನೀವು ಅಂಗಿ ಯಾಕೆ ಧರಿಸುವುದಿಲ್ಲ? ನನ್ನ ತಾಯಿ ಅಂಗಿ ಹೊಲಿಯುತ್ತಾಳೆ. ಬೇಕಿದ್ದರೆ ನಿಮಗೂ ಒಂದು ಅಂಗಿ ಹೊಲಿದು ಕೊಡಲು ಹೇಳಲೇನು?" ಎಂದು ಕೇಳಿದ.

ಭಾಪೂಜಿ ತುಂಟತನದಿಂದ ನಗುತ್ತ, "ನನಗೊಬ್ಬನಿಗೆ ಸಿಕ್ಕರೆ ಸಾಕೇನು? ನನ್ನ ಅಣ್ಣ, ತಂಗಿ, ತಮ್ಮಂದಿರಿಗೆ ಕೂಡ ಅಂಗಿ ಇಲ್ಲವಲ್ಲ, ಮಗೂ" ಎಂದರು. ಹುಡುಗ "ಅವರೆಷ್ಟು ಮಂದಿ ಇದ್ದಾರೆ? ಅವರಿಗೂ ಅಂಗಿ ಕೊಡೋಣ ಭಾಪೂ" ಎಂದ. "ಹೌದೇನು, ನನ್ನ ಬಂಧುಗಳು 40 ಕೋಟಿ ಮಂದಿಗಳಿದ್ದಾರೆ. ಅವರೆಲ್ಲರಿಗೂ ಕೊಡಬಲ್ಲೆಯೇನು? ಎಂದು ಕೇಳಿದರು ಗಾಂಧೀಜಿ.

"SIDDAGANGA" Monthly, Sree Siddaganga Mutt. KRN Q
Registered with the Registrar of News papers for India under No. 17139



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.